# ಅಭಿನವ ಪಂಪ

(ನಾಗಚಂದ್ರನ ಕಾಲನಿರ್ಣಯ ಮತ್ತು
ಕಾವ್ಯವಿಮರ್ಶೆ)



೧೯೩೪

ಕರ್ಣಾಟಕಸಂಘ, ಕರ್ಣಾಟಕ ಕಾಲೇಜ,
ಧಾರವಾಡ

ಮುದ್ರಕರು:
**ಬಳವಂತ ನಾರಾಯಣ ಬಾಗಲವಾಡಿ**
ಮೋಹನ ಮುದ್ರಣಾಲಯ,
**ಧಾರವಾಡ**

ಸಾದಾಪ್ರತಿ ೧ ರೂ. ೪ ಆಣೆ
ಕ್ಯಾಲಿಕೊ ೨ ರೂ.

ಪ್ರಕಾಶಕರು:
**ಡಿ. ಪಿ. ಪತ್ರಾವಳಿ**
ಕರ್ಣಾಟಕಸಂಘ, ಕರ್ಣಾಟಕ ಕಾಲೇಜ,
**ಧಾರವಾಡ**

# ಪ್ರಕಾಶಕರ ಬಿನ್ನಹ

ಕನ್ನಡ ಮಹಾಕವಿಗಳಲ್ಲೊಬ್ಬನಾದ ನಾಗಚಂದ್ರನ ಕಾಲ ನಿರ್ಣಯವಾಗಿ, ಅವನ ಕಾವ್ಯಸೌಂದರ್ಯವು ಹಲವರಿಗೆ ತಿಳಿಯು ವಂತಾಗಲೆಂದು ನಾವು ಈ ಲೇಖನಸಂಗ್ರಹದ ಕೆಲಸವನ್ನು ಎರಡು ವರ್ಷಗಳ ಹಿಂದೆಯೆ ಕೈಕೊಂಡೆವು. ಆದರೆ ಪಂಡಿತರ ಸಹಾಯವು ನಮಗೆ ಕೂಡಲೆ ದೊರಕಲಿಲ್ಲವಾದುದರಿಂದ ಒಂದು ವರುಷ ಬರಿ ನಿರಾಶೆಯಲ್ಲಿಯೇ ಕಾಲಕಳೆಯಬೇಕಾಯಿತು. ಕೊನೆಗೆ ಕೆಲವು ಸಹೃದಯರಾದ ವಿದ್ವಾಂಸರು ನಮಗೆ ನೆರವಾಗುವುದಕ್ಕಾಗಿ ಮುಂದೆ ಬಂದುದರಿಂದ ಮತ್ತೆ ಉತ್ಸಾಹಗೊಂಡು ನಮ್ಮ ಸಂಕಲ್ಪವನ್ನು ಈ ರೀತಿಯಲ್ಲಿ ಸಿದ್ಧಿಗೆ ಒಯ್ಯುತ್ತಿದ್ದೇವೆ. ಪಂಡಿತರ ಸಹಾಯವು ಇದಕ್ಕೂ ಹೆಚ್ಚಾಗಿ ದೊರೆಯುವುದಾಗಿದ್ದರೆ ಕಾವ್ಯವಿಮರ್ಶನಭಾಗ ವನ್ನು ಇನ್ನೂ ಹೆಚ್ಚಿಸುವ ವಿಚಾರವಿದ್ದಿತು. ಆದರೆ ಸಕಾಲದಲ್ಲಿ ಹೆಚ್ಚಿನ ಸಹಾಯವು ಬರುವ ಸಂಭವವು ಕಂಡುಬಾರದಕಾರಣ ಇದ್ದಷ್ಟನ್ನೇ ಪ್ರಕಾಶಗೊಳಿಸಬೇಕಾಗಿದೆ. ಸುದೈವದಿಂದ ಈ ಸಂಗ್ರ ಹದ ಎರಡನೆಯ ಆವೃತ್ತಿಯನ್ನು ತೆಗೆಯುವ ಸುಪ್ರಸಂಗವು ಬಂದರೆ ಆಗ ಹೆಚ್ಚಿನ ವಿಷಯಗಳನ್ನು ಸೇರಿಸಿಕೊಳ್ಳುವ ಆಸೆಯನ್ನು ಇಟ್ಟು ಕೊಂಡಿದ್ದೇವೆ.

ಈ ನಮ್ಮ ಸಾಹಸಕ್ಕೆ ಬೆಂಬಲವಾದ ಮಹನೀಯರು ಹಲವ ರಿದ್ದಾರೆ. ಕೇಳಿದೊಡನೆ ಮುನ್ನುಡಿ ಬರೆಯುವುದಕ್ಕೆ ಒಪ್ಪಿಕೊಂಡು ನಮಗೆ ಉತ್ಸಾಹವನ್ನು ತಂದುಕೊಟ್ಟ ವಿಮರ್ಶಕಾಗ್ರಣಿಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಎಂ. ಎ., ಬಿ. ಎಲ್. ಅವರಿಗೆ ನಾವು ಎಷ್ಟು ಕೃತಜ್ಞರಾದರೂ ಸಾಲದು. ಲೇಖನಗಳನ್ನು ಸಂಗ್ರಹಿಸುವ ಕೆಲಸವು ಆರಂಭವಾದ ಕೆಲವು ದಿವಸಗಳಲ್ಲಿಯೇ ತಮ್ಮ ಲೇಖನವನ್ನು ಕಳುಹಿ ಈ ವರೆಗೆ ಶಾಂತರೀತಿಯಿಂದ ತಾಳಿದ ಶ್ರೀಮಾನ್ ಗೋವಿಂದ ಪೈ ಅವರು ನಮಗೆ ಮಾಡಿದ ಉಪಕಾರವು

ಅಪಾರವಾಗಿದೆ. ಇನ್ನುಳಿದ ವಿದ್ವಾಂಸರಾದರೂ ನಮ್ಮ ತೊಂದರೆ ಯನ್ನು ಸಹಿಸಿ ಬಿನ್ನಹವನ್ನು ಮನ್ನಿಸಿದುದಕ್ಕಾಗಿ ಅವರನ್ನು ನಾವು ಎಂದೂ ಮರೆಯಲಾರೆವು. ಇನ್ನುಮುಂದೆಯಾದರೂ ನಮ್ಮ ಸಂಘವು ಕೈಕೊಳ್ಳುವ ಈ ಬಗೆಯ ಕೆಲಸಗಳಲ್ಲಿ ಈ ಮಹನೀಯರೂ ಇನ್ನಿತರರೂ ನೆರವಾಗಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥದ ಮುದ್ರಣಕಾರ್ಯದಲ್ಲಿ ವಿಶೇಷವಾದ ನೆರವನ್ನಿತ್ತ ಶ್ರೀಮಾನ್ ಆಳವಣಿ ನಾರಾಯಣರಾಯರಿಗೂ ಮುದ್ದಾಗಿ ಮುದ್ರಿಸಿ ಕೊಟ್ಟ ಮೋಹನ ಮುದ್ರಣಾಲಯದ ಅಧಿಕಾರಿಗಳಿಗೂ ಸಂಘವು ಋಣಿಯಾಗಿದೆ.

ಕರ್ಣಾಟಕಸಂಘ<br>ಕರ್ಣಾಟಕ ಕಾಲೇಜ<br>ಧಾರವಾಡ

**ಡಿ. ಪಿ. ಪತ್ರಾವಳಿ**<br>ಅಧ್ಯಕ್ಷ

# ವಿಷಯಸೂಚಿಕೆ

# ಮುನ್ನುಡಿ

೧

ನಾಗಚಂದ್ರಕವಿ ಕನ್ನಡದಲ್ಲಿ ನನ್ನ ಮೊದಲನೆಯ ಒಲವು; ಧಾರವಾಡನಗರದಲ್ಲಿ ನನ್ನ ಕನ್ನಡದ ತೊಳಲಿನ ಮೊದಲನೆಯ ಮಾತು. ಈ ಎರಡು ನೆನಪುಗಳು ಉಕ್ಕಿ, ಪ್ರೊಫೆಸರ್ ನಾಸನೂರರವರು ತಮ್ಮ ಕರ್ಣಾಟಕ ಸಂಘದಿಂದ ಹೊರಡುವ "ಅಭಿನವ ಪಂಪ" ನನ್ನು ಕುರಿತ ವಿಮರ್ಶಾತ್ಮಕ ಗ್ರಂಥಕ್ಕೆ ಒಂದು ಚಿಕ್ಕ ಮುನ್ನುಡಿಯನ್ನು ಬರೆಯಬೇಕೆಂದು ಹೇಳಿದೊಡನೆಯೇ, ಪರಮಾನಂದದಿಂದ ನಾನು ಒಪ್ಪಿದೆನು. ನಾಗಚಂದ್ರನಲ್ಲಿ ಭಕ್ತಿ, ಧಾರವಾಡದ ಮಿತ್ರರ ಸಾಹಿತ್ಯ ಬಾಂಧವ್ಯ, ವಿಮರ್ಶಕಮಹಾಶಯರ ಪುಷ್ಪಮಾಲೆಯ ಜೊತೆಗೆ ನಾನೂ ಒಂದೆರಡು ಬಿಡಿಹೂವುಗಳನ್ನು ಸಲ್ಲಿಸುವ ಅವಕಾಶ, ಇವು ಗಳ ಉತ್ಸಾಹದಲ್ಲಿ ಈ ಮುನ್ನುಡಿ ಸ್ವಲ್ಪ ಲಂಬಿಸಿದರೆ ವಾಚಕರು ಮನ್ನಿಸಬೇಕಾಗಿ ಪ್ರಾರ್ಥನೆ.

ಈ ಗ್ರಂಥದಲ್ಲಿ ಇಡಿಯ ಕನ್ನಡನಾಡಿನಲ್ಲೆಲ್ಲಾ ಸುಪ್ರಸಿದ್ಧರಾದ ಐವರು ಮಹನೀಯರ ಪ್ರಾಜ್ಞವಿಮರ್ಶೆಗಳಿರುವುವು. ಇವರು ಕುಶಲಿಗಳಾದ ಇತಿಹಾಸಪರಿಶೋಧಕರು, ವರಕವಿಗಳು, ವಾಗ್ಮಿಗಳು, ಮಾನ್ಯಪಂಡಿತರು; ಅಭಿನವಪಂಪನ ಕಾಲ, ಆತನ ಗ್ರಂಥಗಳು ರಚಿತವಾದ ವರ್ಷಗಳು, ಆತನ ಜೀವನಚರಿತ್ರೆ, ಕಾಲಸನ್ನಿವೇಶಗಳು —ಜೈನಧರ್ಮದ ಮುಖ್ಯಸಾರಾಂಶ— ಕೃತಿರತ್ನಗಳಾದ ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರಚರಿತಪುರಾಣಗಳ ರಸೋತ್ಪಾದಕ

ವಿಮರ್ಶೆ—ಕವಿಯ ವ್ಯಕ್ತಿಗುಣಪ್ರದರ್ಶಕವಾದ ವರ್ಣನೆ, ಶೈಲಿ—ಇಂತಹ, ನಾಗಚಂದ್ರನ ಗ್ರಂಥವ್ಯಾಸಂಗಕ್ಕೆ ಅತ್ಯಾವಶ್ಯಕವಾದ ವಿಷಯಗಳನ್ನು ಪರಾಮರ್ಶಿಸಿ ಸಾಹಿತ್ಯಾಭ್ಯಾಸಿಗಳಿಗೆ ಮಾರ್ಗವನ್ನು ತೋರಿಸಿದ್ದಾರೆ. ಉತ್ತಮ ಕನ್ನಡಕವಿಗಳನ್ನೆಲ್ಲಾ ಈ ರೀತಿ ಕನ್ನಡ ನಾಡಿನ ಬೇರೆಬೇರೆ ಕಡೆಯ ಪಂಡಿತರು ಒಂದುಗೂಡಿ, ಸಹಕರಿಸಿ, ಕಾವ್ಯವ್ಯಾಸಂಗವನ್ನು ಸುಲಭಪಡಿಸಿ, ಕನ್ನಡಿಗರ ಪ್ರೇಮಕ್ಕೆ ಪಾತ್ರರನ್ನಾಗಿ ಮಾಡಬೇಕೆಂದು ಬಯಸುತ್ತಿದ್ದವರು ಇಂತಹ ಗ್ರಂಥಗಳು ಒಂದರಮೇಲೊಂದು ಇದುವರೆಗೆ ಹುಟ್ಟಿರುವುವೇ ಅಲ್ಲದೆ ಮುಂದೆ ಇನ್ನೂ ಬೇಗಬೇಗ ಮುಂದು ಬರಲೆಂದು ಹಾರೈಸುವರು. ಆಗಲೇ ಬಂದಿರುವುವು—"ಮುದ್ದಣ", ರನ್ನ, ಲಕ್ಷ್ಮೀಶ; ಈಗ ನಾಗಚಂದ್ರ; ನನಗೆ ತಿಳಿದಮಟ್ಟಿಗೆ ಸಿದ್ಧವಾಗುತ್ತಿರುವುವು ಕುಮಾರವ್ಯಾಸ, ಷಡಕ್ಷರಿ, ಸರ್ವಜ್ಞಮೂರ್ತಿ, ಆದಿಪಂಪ. ಸಾಹಿತ್ಯಲಕ್ಷಣವನ್ನು ಸಾಮಾನ್ಯವಾಗಿ ಶಾಸ್ತ್ರರೂಪದಲ್ಲಿ ಹೇಳುವುದು ಇರಲಿ-ಅಗತ್ಯವಾಗಿ ನಮಗೆ ಬೇಕಾಗಿರುವುದು ವ್ಯಕ್ತಿವಿಮರ್ಶೆ, ರಸಾನುಭವ, ನಿಷ್ಕೃಷ್ಟವಾದ ಕಾವ್ಯಪರಿಜ್ಞಾನ. ಇಂತಹ ಅಗತ್ಯಕಾರ್ಯದಲ್ಲಿ ಒಂದು ಹೆಜ್ಜೆಯನ್ನು ಮುಂದಿಟ್ಟ ಧಾರವಾಡದ ಕರ್ಣಾಟಕಕಲಾಶಾಲೆಯ ಕರ್ಣಾಟಕಸಂಘವನ್ನೂ, ಸಹಕರಿಸಿ ಸೇವೆಯನ್ನು ಅರ್ಪಿಸಿದ ವಿದ್ವನ್ಮಣಿಗಳನ್ನೂ ಕನ್ನಡಿಗರೆಲ್ಲಾ ಅಭಿನಂದಿಸತಕ್ಕದ್ದಾಗಿದೆ.

೨

ನಾಗಚಂದ್ರನ ಎರಡು ಕಾವ್ಯಗಳನ್ನೂ, ಈ ವಿಮರ್ಶೆಗಳನ್ನೂ ಓದಿದವನ ಮುಂದೆ ಕವಿಯ ಯಾವ ಮೂರ್ತಿ ಎದ್ದುನಿಲ್ಲುತ್ತದೆ? ನಾಗಚಂದ್ರನ ಪುರುಷಸ್ವರೂಪವೇನು? ಆಳ್ಮೆಯೇನು? ತಂದೆ, ತಾಯಿ, ಕುಲ, ಗೋತ್ರ, ಅಧಿಕಾರ, ರಾಜಾಸ್ಥಾನ, ಕಾಲ, ಗ್ರಂಥವರ್ಷ— ಇವು ಒಂದೂ ಆತನ ಬಾಯಿಂದಹೊರಟಿಲ್ಲ; ಉದಾಸೀನ

ಭಾವಿಸಿರಬಹುದು. ಹೆಸರು ನಾಗಚಂದ್ರ—ಮುದ್ದಾದ ಹೆಸರು—ಪ್ರಿಯವಾದ ಬಿರುದು, ಅಭಿನವಪಂಪ: "ಕನ್ನಡಕ್ಕೊಡೆಯನೊರ್ವನೆ" ಆಪ್ತ ಆದಿಪಂಪನಲ್ಲಿ ಅಮಿತವಾದ ಭಕ್ತಿ; ಬಳಿಗೆ ಆತನ ಸಮಕ್ಕೆ ಬರಲಾರೆನೇ ಎಂಬ ಒಂದು ಸಂಶಕೆಯು ಚಿಮ್ಮುತ್ರಗೆ. ಜಿನೋಪಾಸನೆ, ಕಲೋಪಾಸನೆ— ಇವು ನಿತ್ಯಾನುಷ್ಠಾನ. ಕಾವ್ಯಗಳನ್ನು ಹೇಳುವುದು— "ಶುಭಧ್ಯಾನಾರ್ಥಿಯೆನ". (ರಾ. ೧. ೩೮). ಎರಡೂ ಪುರಾಣಗಳೇ—

ಕಥೆ ಜಿನಚರಿತಮೆ, ಕವಿ ಜಿನ
ಕಥೆಯಂ ಪೇಳ್ವವನೆ,§ ರಾಜವಿಟಚೋರಕಥಾ।
ಕಥೆ ಕಥೆಯೆ, ಕವಿ ಕವಿಯೆ, ತ
ತ್ಕಥೆಯಂ ಪೇಳ್ವಪ್ರಶಸ್ತ್ಯಮಂ ಪುಟ್ಟಿಸುಗುಂ॥

(ಮಲ್ಲಿ. ೧. ೫೦.)

ಜಿನಚರಿತವೇ ಕಥೆ—ಜಿನಕಥೆಯನ್ನು ಹೇಳಿದವನೇ ಕವಿ—ಮಿಕ್ಕುವೆಲ್ಲಾ ಅಪ್ರಶಸ್ತ.

ಪಂಪರಾಮಾಯಣದಲ್ಲಿಯೂ ಇದೇ ಸಿದ್ಧಾಂತ—ಒತ್ತಿ ಒತ್ತಿ ಹೇಳುವುದು—

"ರಾಗದ್ವೇಷನಿಬಂಧಮಪ್ಪ ಕೃತಿಯಂ.... ಪೇಳ್ವಿಖಿಲಮಂ
ರಾಗಾವಿಲಂ ಮಾಳ್ಪ ವಿದ್ಯಾಗರ್ವಗ್ರಹಪೀಡಿತರ್
.... ಬೆತ್ತಿಬೆಳೆವಂತಕ್ಕುಂ ವಿಷೋದ್ಯಾನಮುಂ"

(ರಾಮ. ೧. ೩೪).

ಪೊಗಳ್ದು ಮಹಾತ್ಮರುಜ್ವಲಮೆನಿಪ್ಪ ಗುಣಂಗಳನುಜ್ವಲಪ್ರಸಿ
ದ್ಧಿಗೆ ಪೊಲನಾಗದುಜ್ವಲಿಸಿದಪ್ರತಿಮಪ್ರತಿಭಾಪ್ರಭಾವದಿಂ,

---

§ ಈ ವಾಕ್ಯದಿಂದ ಮಲ್ಲಿನಾಥಪುರಾಣಕ್ಕೆ ಮುಂಚೆ ಒಂದು ಜಿನಪುರಾಣವನ್ನೂ ಬರೆದಿರಬಹುದೆಂಬ ಊಹೆಗೆ ಸಾಕಾದಷ್ಟು ಅವಕಾಶ ಉಂಟೆ?

ಪೊಗೞ್ದು ದುರಾತ್ಮರಂ ಪೊಗದೊಳಿರ್ದುಗುೞ್ದಿಂ ಪೊಱಗಿಕ್ಕಲಾದನಾ
ಲಗೆಯುವನೆತ್ತು ನಾಲಗೆಯೊಳೋದಿಪವಂ ಕೃತಿಯೇ, ಕೃತಾರ್ಥನೇ ?
(೧. ೩೫).

ನಾಯಕನನ್ಯನಾಗೆ ಕೃತಿ ವಿಶ್ರುತಮಾಗದುದಾತ್ತ ರಾಘವಂ
ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು, ಕಾ
ಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತುಪಾ
ದೇಯಮೆನಿಕ್ಕುಮೇ ? ವಿಷಯಮೊಪ್ಪದೊಡಾವುದುಮೊಪ್ಪಲಾರ್ಕುಮೇ ?
(೧. ೩೭).

ಕಾವ್ಯದಲ್ಲಿ ವಿಷಯೋದ್ಯಾನವನ್ನು ಬೆಳೆಯಬಾರದು. ಉಜ್ವಲಪ್ರತಿಭೆಗೆ ಮಹಾತ್ಮರ ಗುಣಗಾನವೇ ಸಿದ್ಧಿ. ವಿಷಯ ಒಪ್ಪದಿದ್ದರೆ ಯಾವುದೂ ಒಪ್ಪಲಾರದು. "ರೀತಿ"ಯ ಬೆಲೆಯನ್ನು ನಮ್ಮ ಕವಿ ಅರಿಯನೆಂದಲ್ಲ: "ವಿಷಯ"ದ ಬೆಲೆಯನ್ನು ಇನ್ನೂ ಚೆನ್ನಾಗಿ ಅರಿತಿದ್ದನು.

ಈ "ಉದಾತ್ತ" ಭಾವದಲ್ಲಿ— "ಉದಾತ್ತ" ಎಂಬುದು ನಾಗಚಂದ್ರನಿಗೆ ಬಹು ಪ್ರಿಯವಾದ ಶಬ್ದ—ಈ ಧರ್ಮಪ್ರಭಾವನೆಯ ಭರದಲ್ಲಿ, ತನ್ನ ವೈಭವದ ಒಂದು ಮಾತು ನಮ್ಮ ಪುಣ್ಯಕ್ಕೆ ಹೊರಟು ಬಂದಿದೆ: ಬಿಜಾಪುರದಲ್ಲಿ ಒಂದು ಜೈನಬಸದಿಯನ್ನು ಕಟ್ಟಿಸಿದನೆನ್ನುವುದು—

ನಿಜವಿಭವೋದಯಂ ಸಫಳಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ
ವಿಜಯಪುರಕ್ಕಳಂಕರಣಮಾಗಿರೆ ಮಾಡಿಸಿ.... (೧೪. ೨೯೭).†

† ಈ ಲೇಖಕನು ಹೋದವರ್ಷ ಬಿಜಾಪುರಕ್ಕೆ ಹೋಗಿದ್ದಾಗ ಅಲ್ಲಿ ಈ ಬಸದಿ ಇರುವುದೇ ಎಂದು ವಿಚಾರಮಾಡಿದನು. ಯಾವ ಸಂಗತಿಯೂ ತಿಳಿಯಲಿಲ್ಲ.

ಕಲೋಪಾಸನೆ ಜಿನೋಪಾಸನೆಯ ಬೆನ್ನೆಳಲು— ಯಾವಾಗಲೂ ವಿಭವಕ್ಕೆ–ಕಲೆಗೆ–"ಪ್ರಶಸ್ತ" ಯಾವುದು? "ವಿಶ್ರುತ" ಯಾವುದು "ಸಫಲ" ಯಾವುದು ಎಂಬ ಚಿಂತನೆಯೇ:—

ಮುನ್ನಿನುಗೆ ಕೃತಿಗೆ ಸೌಭಾ
ಗ್ಯೋನ್ನತಿಯುಂ ಸುಕವಿ ಪಂಪನಾದಿಪುರಾಣಂ
ಪೊನ್ನನ ಶಾಂತಿಪುರಾಣಂ,
ರನ್ನನ ಕೃತಿರತ್ನಮೆನಿಸಿದಜಿತಪುರಾಣಂ.

(ಮಲ್ಲಿ. ೧. ೨೫).

—ಈ ವಿನಯ.

ರಸಮುಂ ನಾಲಗೆ, ಕವಿತಾ
ರಸಮುಂ ಕವಿ, ಕುಸುಮರಸಮನಳಿಮಾಳೆ, ಸುಧಾ
ರಸಮುಂ ಸುರರಕ್ಷ್ಯಯುಮಱಿ
ರಸಮುಂ ಪರಮಾತ್ಮನೊೞ್ ಮನಮುೞಿದವರೞ್ಯುರ್ !

(೧. ೨೬).

—ಈ ಕವಿತೆಯ, ಆತ್ಮದ, ರಸಜ್ಞಾನ.

ಧರೆ ಪೊಗೞೆ ವೀತರಾಗನ
ಚರಿತದೊಳಳವಡಿಸಿ ಸಕಲ ರಸಮುಂ, ಕವಿತಾ
ಪರಿಣತಿಯುಂ ಮೆಱೆದೀ ಕಾ
ವ್ಯರಸಾರ್ಣವಪೂರ್ಣಚಂದ್ರನಭಿನವಪಂಪಂ

(೩೯).

ಜಿನಪತಿಗಂ, ಜಿನಮುನಿಗಂ,
ಜಿನಾಗಮಕ್ಕಂ, ಜಿನಾಧಿಪತಿಭವನಕ್ಕಂ
ಜಿನಗುಣಸಂಪತ್ತಿಗಮಾ—ಎಱೆ
ಪನೆಱೆಗನುಱಿದವರ್ಗೆ ನಾಗಚಂದ್ರಕವೀಂದ್ರಂ (೪೦)

—ಈ ಕಾವ್ಯಪ್ರತಿಭೆಯ ಪರಮಾತ್ಮಾರ್ಪಣ.

ತನ್ನ ವಿಷಯವಾಗಿ ಇನ್ನೇನನ್ನೂ ತಾನೇ ಹೇಳದಿದ್ದರೂ ಬಿಜಾಪುರದ ಪ್ರಾಂತದಲ್ಲಿ ದೊರೆತ ಒಂದು ಶಾಸನದಿಂದಲೂ, ಮುಖ್ಯ ವಾಗಿ ಪುಣ್ಯಕ್ಷೇತ್ರವಾದ ಶ್ರವಣಬೆಳ್ಗೊಳದಲ್ಲಿರುವ ಶಾಸನಗಳಿಂದಲೂ, ದೋರಸಮುದ್ರದ ಆಸ್ಥಾನದ ಕಂತಿಹಂಪರ ಸಮಸ್ಯೆಯ ಜನಪ್ರತೀತಿಯಿಂದಲೂ, ನಾಗಚಂದ್ರನ ಹೆಸರಿನ ಸರುಗಂಪು ಉತ್ತರ ಕರ್ಣಾಟಕದಲ್ಲಿಯೇ ಅಲ್ಲ, ನಮ್ಮ ಮೈಸೂರಿನ ತಂಗಾಳಿಯಲ್ಲಿ ಕೂಡ ಬೀಸಿ ಬರುತ್ತಿದೆ. ಆತನ ರಾಜಾಶ್ರಯವನ್ನು ಕಂಡೆವೋ, ಕಾಣ ಲಿಲ್ಲವೋ, ಮೂರ್ತಿ ಹೊಳೆದು ಮಾಯವಾಗುತ್ತದೆ—ಜಿನಗುರುಗಳ ಆಶ್ರಯವಂತೂ, ನಿಸ್ಸಂಶಯವಾಗಿ, ಸ್ಥಿರವಾಗಿ, ಮನಸ್ಸಿನಲ್ಲಿ ಬೇರೂ ರುತ್ತದೆ

ಶ್ರೀಗಂ, ಪರಮಾತ್ಮಪದ
ಶ್ರೀಗಂ, ನೆಲೆ ಧರ್ಮಮೆಂದು, ಧರ್ಮಧ್ಯಾನೋ
ದ್ಯೋಗಂ ಕೈಮಿಗೆ, ವಿಷಯವಿ
ರಾಗಮನಂ, ಸುಖದಿನಿರ್ದನಘನವಸಂಪಂ!

(ಮಲ್ಲಿ.೧).

ನಾಗಚಂದ್ರನ ಆತ್ಮದಲ್ಲಿ ಧರ್ಮವುಂಡು: ಅವಳಿಜವಳಿಯಾಗಿ ಕವಿತೆ ಅದರ ಹಿಂದು.

೩

ನಾಗಚಂದ್ರನ ಕವಿತಾಟೀಕ್ಷ್ಣಿಯ ಪ್ರಥಮಫಲ—ಬೇಗ ಮಿಡಿಯಾಗಿ ಹಣ್ಣಾದ ಮೊದಲನೆಯ ಹಣ್ಣು— ಮಲ್ಲಿನಾಥಪುರಾಣ. "ವಿದ್ವಜ್ಜನ ಸಭೆಯೊಳ್ ಮಾನ್ಯಂ" (ಮಲ್ಲಿ. ೧. ೪೧), "ಚತುರ ಕವಿಜನಾಸ್ಥಾನರತ್ನಪ್ರದೀಪಂ" (೪೩) "ಸಾಹಿತ್ಯಸರ್ವಜ್ಞಂ" (೬೯) "ಸಾಹಿತ್ಯವಿದ್ಯಾಧರಂ" (೨. ೮೦). "ನಾಗಚಂದ್ರ ವಿಬುಧಂ"

(ರಾಮ. ೧೬. ೯೮). "ಪಂಡಿತ ಮಂಡಲಿ ಮೆಚ್ಚೆ ನೇರ್ಪುವೆತ್ತಿರಲ ವಿರೋಧವಾಗೆ" (೯೭) ಕೃತಿಯನ್ನು ಹೇಳಬೇಕು. "ಆದ್ಯರಾ ಪೇಳ್ದಿಂದದಿಂ ಅದ್ಭುತಸಸಂ" (೯೮) ಹೇಳಬೇಕು— "ಪ್ರಸಿದ್ಧಕವಿ ಪದ್ಧತಿಯಿಂ" (ಮಲ್ಲಿ. ೧೪. ೨೯೪). ನಮ್ಮ ನೂತನಭಾಷೆಯಲ್ಲಿ ಹೇಳುವುದಾದರೆ, ಸಾಹಿತ್ಯವಿದ್ಯೆಯ ಪರೀಕ್ಷೆಯನ್ನು ಕೊಟ್ಟು, ಉತ್ತಮ ಪಟ್ಟಾಂಕಿತನಾಗಿ, ಮಹಾಮಹೋಪಾಧ್ಯಾಯನೆಂಬ ಬಿರುದಿಗೆ ಅಧಿಕಾರಿಯಾದವನು ಹಿಂದಿನ ಸಾಹಿತ್ಯದ ಮೇಲೆ ತನ್ನದೊಂದು "ಕೈ" ತೋರಿಸಲೇಬೇಕು. "ಹೇಯ" ಯಾವುದು, "ಉಪಾದೇಯ" ಯಾವುದು ಪೂರ್ವಿಕರ ಸಂಪ್ರದಾಯದಲ್ಲಿ, ಆತ್ಮಗುಣ, ಧರ್ಮಗುಣ, ಕಾವ್ಯಗುಣಕ್ಕನುಸಾರವಾಗಿ, ತನ್ನ ಮನೋಧರ್ಮಕ್ಕನುಸಾರವಾಗಿ, "ಸ್ವ"ಧರ್ಮಶ್ರೀಯನ್ನನ್ನು ಪಡೆವ ಮಾರ್ಗ ಯಾವುದು, ಎಂಬ ನೆನಹುಗಳಿಗೆ ಅವಕಾಶವಿಲ್ಲ— "ಕಾಲಿಡಲು ತೆರಪಿಲ್ಲ". ಹಿಂದಿನ ಕವಿ-ರಾಜಮಾರ್ಗದಲ್ಲಿ ತಾನೂ ನಿಂತು, ಕವಿತೆಯ "ಮಗ್ಗ"ವನ್ನು ನೆಯ್ಯುವ "ಚತುರ ಕವಿ"ಯಾಗಬೇಕು.

ಇದ್ದ ನೂಲು ಸ್ವಲ್ಪ. ಚಾವುಂಡರಾಯನು ಹೇಳಿರುವಂತೆ- "ವೈಶ್ರವಣನೆಂಬರಸಂ ಜಲದಕಾಲದೊಳ್ ರಮಣೀಯಪ್ರದೇಶಂಗಳಂ ನೋಡಲೆಂದು ಪೋಗಿ ಬರುತ್ತುಂ ಪೆರ್ಗಾಳಿಯು ಕೋಳ್ಕೊಳ್ ಕೆಡೆದಿರ್ದ ವಟವೃಕ್ಷಮಂ ಕಂಡು ನಿರ್ವೇಗದಿಂ ಮಗಂಗೆ ರಾಜ್ಯಮಂ ಕೊಟ್ಟು ಶ್ರೀನಾಗಯತಿಗಳ ಪಕ್ಕದೆ ಧರ್ಮಮಂ ಕೇಳ್ದು" ತಪಸ್ಸು ಮಾಡಿ, ಅಹಮಿಂದ್ರನಾಗಿ, ಕುಂಭರಾಜನಿಗೂ ಪ್ರಭಾವತೀದೇವಿಗೂ ಮಗನಾಗಿ ತೀರ್ಥಂಕರನಾಗಿ ಹುಟ್ಟಿ, ತೊರೆದು, ದೀಕ್ಷೆಯನ್ನು ವಹಿಸಿ —"ಮಲ್ಲಿನಾಥಸ್ವಾಮಿ ಮುಕ್ತಿಗೆ ಸಂದರ್" ಇದು ಕಥೆ: ಜಿನಭಕ್ತನಿಗೂ ಸರಿ, ಕವಿತಾಪದ್ಧತಿಯನ್ನು ಪ್ರದರ್ಶಿಸುವವನಿಗೂ ಸರಿ. ಇದರ ಮೇಲೆ ಇನ್ನೂ ಪ್ರಾಯ: ಕವಿತ್ವ ದುಡುಕುತ್ತಿದೆ–ಜಿನಧರ್ಮ

ಕಡಿವಾಣವನ್ನು ಸೆಳೆಯುತ್ತಿದೆ: ಒಟ್ಟುಕಟ್ಟು, ಉತ್ತರಾರ್ಧ, ತತ್ತ್ವ; ಪೂರ್ವಾರ್ಧ, ರಕ್ತ ಕುದಿಯುತ್ತಿರುವುದು. "ವಿಷಯಸುಖ"ಗಳ ಚಿತ್ರ: ಚಿತ್ರದ ಮೇಲೆ ಚಿತ್ರ, ಬಣ್ಣದ ಮೇಲೆ ಬಣ್ಣ, ರಾಗದ ಮೇಲೆ ರಾಗ, ಭೋಗದ ಮೇಲೆ ಭೋಗ:—ಚರ್ವಿತಚರ್ವಣ !

ಫುಲ್ಲಶರಂ, ಬಸಂತದ ಪುಗಿಲ್, ನೆಱೆದಿಂಗಳ ತಣ್ಪಿನಿಸಿಲ್, ಮುಗುಳ್
ಮಲ್ಲಿಗೆ, ಬಂದಮಾವಲೆವ ತೆಂಕಣಗಾಳಿ, ವಿಪಂಚಿಯಿಂಚರಂ,
ನಲ್ಲಳ ಲಲ್ಲೆ, ಕೋಗಿಲೆಯ ಬಗ್ಗಣೆ, ತುಂಬಿಯಗೇಯಮೆಂಬಿನಂ
ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ॥
(ಮಲ್ಲಿ. ೧. ೪೪).

ಈ ಗ್ರಂಥ "ಸತ್ಕೃತಿ"ಯೇ ಸರಿ—ಉತ್ಕೃಷ್ಟ ಕೃತಿಯೂ ಆಹುದೇ? ಮೊದಲನೆಯ ಪಂಕ್ತಿಯ ಕವಿಗಳ ಮೊದಲನೆಯ ಪಂಕ್ತಿಯ ಕಾವ್ಯಗಳಲ್ಲಿ ಸೇರುವುದೆ? "ರಾಮಾಯಣ" ವಿರದಿದ್ದರೆ ನಾಗಚಂದ್ರನು ಈ ಮಲ್ಲಿನಾಥಪುರಾಣದಿಂದಲೇ ಉತ್ತಮ ಕವಿಸ್ಥಾನಕ್ಕೆ ಸಲ್ಲುತ್ತಿದ್ದನೇ? ಭಿನ್ನರುಚಿಯಾದ ಲೋಕದಲ್ಲಿ ನಿಷ್ಕರ್ಷಿಸಿ ಹೇಳುವುದು ಹೇಗೆ?

ಈ ಗ್ರಂಥದ ಪ್ರಶಸ್ತಿಯನ್ನು ನಾನು ಕೈಗೊಳ್ಳಬಾರದು. ನನ್ನ ಮಾನ್ಯಮಿತ್ರರೂ ಸರಸಕವಿಗಳೂ ಆದ ಬೇಂದ್ರೆಯವರು ಅದನ್ನು ಸಂಪೂರ್ಣವಾಗಿ ನಿರ್ವಹಿಸಿದ್ದಾರೆ. ಅವರ ಒಂದು ವಾಕ್ಯವನ್ನು ಇಲ್ಲಿ ಎತ್ತಿ ಬರೆಯುತ್ತೇನೆ– "ಮಲ್ಲಿನಾಥವು ಮೂರ್ತಿಶಿಲ್ಪ; ಚರಿತ ಪುರಾಣವು ವಾಸ್ತುಶಿಲ್ಪ" ಅವರ ಟೀಕೆಯನ್ನೂ ಸೇರಿಸುತ್ತೇನೆ– "ಮಲ್ಲಿನಾಥ ಪುರಾಣವು ಹತ್ತೆಂಟು ಎಸಳಿನ ಹೂವು ಅರಳಿದಂತೆ; ರಾಮಚಂದ್ರಚರಿತಪುರಾಣವು ಸಾವಿರ ಕಂಬದ ಬಸ್ತಿಯನ್ನು ಕಟ್ಟಿದಂತೆ"

ಕಾವ್ಯದ ಮುಗ್ಗದಲ್ಲಿ ಅರ್ಧನೆಯ್ದ ಸಂಸಾರಸುಖ ಸಾಮ್ರಾಜ್ಯ,

೧-೮ ಆಶ್ವಾಸಗಳು; ೯ರ ಮಧ್ಯ, ತಿರುವು, ಸುಖದ ಬಳ್ಳಿಗೆ ಕೊಡಲಿಯ ಪೆಟ್ಟು:—

ಸಿಡಿಲೆಂಬ ಜವನ ಕೊಡಲಿಯ
ಕಡುವೊಯ್ಲಿಂ ನೆಗೆದ ಬೇಗೆಗೞೊಡನೆ ನೆಲಂ ಬಾ
ಯ್ವಿಡೆ ಬಿಟ್ಟುಕೆಡೆವ ತೆಱದಿಂ
ಕೆಡೆದಾಲಮನಿಸಿದರೊಳವನಿಪಾಳಂ ಕಂಡಂ.

(೯. ೫೫).

ಅಲ್ಲಿಂದಾಚೆಗೆ (೯–೧೪) ಧರ್ಮಸಾಮ್ರಾಜ್ಯಸುಖ. ಚತುರ ಕವಿಯ ಚಾತುರ್ಯ ಹಿಮ್ಮೆಟ್ಟಿ, "ಆಟಕಾಱರ ಜೋಹ"ವನ್ನು ಕಳೆದಿಟ್ಟು, ನಾಗಚಂದ್ರನ ಹೃದಯದಿಂದ ಆಳವಾದ, ಗಂಭೀರವಾದ ಆತ್ಮಸ್ವರ ಏಳುತ್ತದೆ. ಕೇವಲ ಕವಿತ್ವದ ಬಣ್ಣದೆಳೆ ಹೋಗಿ, ಪರಮ ಸುಖದ, ನಿಷ್ಕಲದರ್ಶನದ, ವಿಮಲರತ್ನತ್ರಯದ ಚಿನ್ನದೆಳೆ ಹೊಮ್ಮುತ್ತದೆ. ಎಷ್ಟು ಆಳ, ಎಷ್ಟು ಗಂಭೀರವೆಂದರೆ–ಈ ವೈರಾಗ್ಯದ, ಜಿನಸ್ತುತಿಯ ಪದ್ಯಗಳೇ ಉತ್ಕೃಷ್ಟಕವಿತೆಯಾದ ರಾಮಚಂದ್ರಚರಿತಪುರಾಣಕ್ಕೊಸಾಕಾಗುತ್ತವೆ. ಅವುಗಳಿಗೆ ಬೇರೆಯಾದ, ಹೊಸತಾದ, ಚೆಲುವಾದ ವಾಣಿ ನಾಗಚಂದ್ರನಿಗೆ ಬೇಡ. ಅಲ್ಲಿಗೆ ಅವನು ತಣಿದನು.

ಸುತ ಸಮ್ಮತ್ಸ್ವಯದೊಳ್ ಪುರಾತನ ಜಗದ್ವಿಖ್ಯಾತಭೂನಾಥರೀ
ಸ್ಥಿತಿಯಿಂ ರಾಜ್ಯಸುಖಂಗಳೊಳ್ ತಣಿದು, ತತ್ವಾಭ್ಯಾಸವಿಶ್ರಾಂತಜೀ
ವಿತರಾದರ್, ಮುಱಿದೀಕುಳಕ್ರಮಮನಾನಿಂತಿರ್ದು, ಸನ್ಮಾರ್ಗಪ
ದ್ಧತಿಯುಂ ಹಾಸ್ಯರಸಪ್ರವಾಹಭರದಿಂ ಪ್ರಕ್ಷಾಳಿತಂ ಮಾಡಿಪ್ಪೆನೇ?

(ಮಲ್ಲಿ. ೯. ೮೯; ರಾ. ೬. ೮೧).

ಮದನಫಣಿನಿರ್ವಿಷೀಕರ
ಣ ದಿವ್ಯಮಂತ್ರಸ್ವನಂ, ಜರಾಮರಣಶಿಖಾ

ವಿದಳನ ಟಂಕಧ್ವನಿ ಪೊ
ಣ್ಮಿದತ್ತು ಮುನಿ ಪರಸೆ ಧರ್ಮವೃದ್ಧಿ ನಿನಾದಂ.
(ಮಲ್ಲಿ. ೯. ೧೨೯; ರಾ. ೬. ೨೮)

ಅರವಿಂದಸ್ಮೇರವಾಸ್ಯಂ ತಿಳಿಪೆ ಹೃದಯಸಂಶುದ್ಧಿಯಂ, ಮಾನಸಂ ಶಾಂ
ತರಸಾಧೀನಂ ಸಮಾಧಾನಮನಱಪೆ, ತಪಸ್ಯ್ಪತ್ತಮುತ್ತಪ್ತ ಕಾತ-
ಸ್ವರಶಾಖಾಲೀಲೆಯಂ ಪಾಳಿಸೆ ತನು, ನಯನಂ ಕಾಪಿನ್ಪಿರಂ ಮಾಡೆ ಕಾರು
ಣ್ಯರಸಸ್ರೋತಂಗಳಿಂ, ಲೋಕಮನೆಱಗಿಸಿದಂ ಬಾಳಚಂದ್ರ ವ್ರತೀಂದ್ರಂ.
(ಮಲ್ಲಿ. ೧೦. ೧೩೩; ರಾಮ. ೧-೧೭).

ಮದನಪತತ್ರಿ ನಿನ್ನ ದೆಸೆಗಾಣದು, ಮೋಹಮಹಾಹಿ ನಿನ್ನ ಸ
ಣ್ಮದು, ಕಲುಷಾನಳಂ ನಿಜದಯಾರಸದಿಂ ಮಸಿಯಾಯ್ತು, ಪಾಪಮಿ
ಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳಮಾಯ್ತೆನೆ, ಪೆಣ್ಣ ಮಣ್ಣ ಮೋ
ಹದ ಪರಮಾತ್ಮರತ್ತಿರಲಿ, ನೀನೆ ಜಗತ್ತ್ರಿತಯಾ ಜಿನೇಶ್ವರಾ.
(ಮಲ್ಲಿ. ೧೨. ೧೭೭; ರಾಮ. ೫. ೯).

ಜಿನಾಷ್ಟಕವೂ (ಮಲ್ಲಿ. ೧೦. ೧೨೦-೭; ರಾಮ. ೭. ೪೦-೭), ಪರಿನಿರ್ವಾಣ ಕಲ್ಯಾಣದ ಗ್ರಂಥಾಂತ್ಯವೂ (ಮಲ್ಲಿ. ೧೪. ೨೫೪-೨೬೩; ರಾಮ. ೧೬. ೭೮-೮೨) ಎರಡರಲ್ಲೂ ಒಂದೇ. ಪ್ರಾಯದ ಕವಿತೆಯ ಅಂತರ್ವಾಣಿಯೂ, ವಯಸ್ಸಿನ ಕವಿತೆಯ ಅಂತರ್ವಾಣಿಯೂ ಹೀಗೆ ಒಮ್ಮಡಿ ಮಿಡಿಯುತ್ತವೆ!—

ಮೆಚ್ಚಿ ಗಡ, ಮುಳಿಯೆ ಗಡ, ಬಗೆ
ಬೆಚ್ಚಿರೆ, ಬೇಱಿಸಾಗೆ ನಿನ್ನ ಪದದೊಳ್, ಮನುಜಂ
ಗುಚ್ಚಗತಿ ನೀಚಗತಿವಡೆ
ವಚ್ಚರಿ ಕಣ್ದೆಱೆವ ತೆಱಿನನಱಿಪೆನಗಹಾ‍ !
ನಿತ್ಯಸುಖಮಾತ್ಮರೂಪಮ
ನಿತ್ಯಸುಖಂ ಮೋಹರೂಪಮೆಂಬ ವಿವೇಕಂ
ಸತ್ಯಸ್ವರೂಪಮುದಱಿತೊಳ
ಗತ್ಯಂತಾನುಭವ ವಿಭವಮಕ್ಕೆನಗಹಾ‍ !

ಒಂದು ಸಣ್ಣ ವ್ಯತ್ಯಾಸ—ದೊಡ್ಡ ವ್ಯತ್ಯಾಸವೇ. ಪೂರ್ವಕಾವ್ಯದಲ್ಲಿ ಪ್ರಾರ್ಥನೆ ತನಗೆ; ಉತ್ತರಕಾವ್ಯದಲ್ಲಿ ತನಗೂ, ಸರ್ವಜೀವಗಳಿಗೂ ! "ಅಱಿಪೆಮಗಹಾ" "ವಿಭವಮಕ್ಕೆಮಗಹಾ !"

ಶ್ರೀಜಿನಪತಿಪದಕಮಳವಿ
ರಾಜಿತಮಂ ಸಿದ್ಧಸೇಸೆಯಂ ತಳೆದನಿಳಾ
ಪೂಜಿತಚರಿತಂ ಸಕಳಕ
ಳಾ ಜನ್ಮಾವಾಸನೆನಿಸಿದಘನವಪಂಪಂ ! (ಮಲ್ಲಿ. ೧೧. ೧)

೪

ಈಗ "ಪಂಪರಾಮಾಯಣ"ದ "ವಾಸ್ತುಶಿಲ್ಪ"—"ಸಾವಿರ ಕಂಬದ ಬಸದಿ". ಶ್ರೀ. ಪೂಜಾರರವರು ಜೈನಧರ್ಮದ ಸಾರಾಂಶವನ್ನೂ, ರಾಮಚರಿತಪುರಾಣದ ಮಹತ್ವವನ್ನೂ ಚೆನ್ನಾಗಿ ವಿವರಿಸಿದ್ದಾರೆ. ಜೈನಸಂಪ್ರದಾಯದ ಸಂಸ್ಕೃತ ರಾಮಾಯಣಗಳ ಕಥೆಯನ್ನು ಸ್ಪಷ್ಟವಾಗಿ ಮಾತೃಕೆಗಳಿಂದ ತೋರಿಸಿಕೊಟ್ಟಿದ್ದರೆ ಇನ್ನೂ ಪ್ರಶಸ್ತವಾಗಿತ್ತು. ಏಕೆಂದರೆ ಮೂಲವನ್ನು ಹೋಲಿಸಿ ಕವಿಯ ವ್ಯಕ್ತಿತ್ವವನ್ನೂ, ಸ್ವಂತ ಕೈವಾಡವನ್ನೂ ಅರಿಯುವುದು ಸುಲಭ; ಇಲ್ಲದಿದ್ದರೆ ಆತನ ಸಂಸ್ಕರಣಕಾರ್ಯ ನಮಗೆ ಗೋಚರಿಸುವುದಿಲ್ಲ.

ಕನ್ನಡದಲ್ಲಿರುವ ಚಾಮುಂಡರಾಯ ಪುರಾಣದ ಕಥೆಯ ಪ್ರಸಕ್ತಭಾಗವನ್ನು ಹೀಗೆ ಸಂಗ್ರಹಿಸಬಹುದು.§ "ಶ್ರೀಮುನಿ ಸುವ್ರತ ಭಟ್ಟಾರಕರ ತೀರ್ಥಸಂತಾನದೊಳ್ ಎಂಟನೆಯ ಬಲದೇವ ವಾಸುದೇವರಪ್ಪ ರಾಮಲಕ್ಷ್ಮಣರ ಚರಿತಂ. . . .ಜಂಬೂದ್ವೀಪದ ಭರತಕ್ಷೇತ್ರದ ಕಾಶಿವಿಷಯದ ವಾರಣಾಸಿಪುರಮನಾಳ್ವ ದಶರಥ ಮಹಾರಾಜಂಗಂ ಅಪರಾಜಿತಾದೇವಿಗಂ....ಸುಮಿತ್ರೆಗಂ...." ರಾಮ ಲಕ್ಷ್ಮಣರು ಹುಟ್ಟುವರು. ದಶರಥನು ಸಗರನ ರಾಜಧಾನಿಯಾದ ಸಾಕೇತವನ್ನು ಹೊಕ್ಕು, ಭರತ ಶತ್ರುಘ್ನರನ್ನು ಪಡೆಯುವನು. "ರಾಮಲಕ್ಷ್ಮಣರ್ಗೆ ದಶಕಂಧರವಂಶದಿಂ ವಿಜಯಕಾರಣಂ ಪ್ರಕೃತಮಾಗಿರ್ಪಿನಂ, ಇತ್ತ ಮಿಥಿಳಾಪುರದೊಳ್ ಜನಕನೆಂಬರಸಂಗಂ ವಸುಧಾದೇವಿಗಂ ಸೀತೆಯೆಂಬಳ್ ಮಗಳಾಗೆ"........ಯಜ್ಞವನ್ನು ಕೈಕೊಂಡು ಜನಕನಿರಲು, ಸೇನಾಪತಿ "ರಾಮಲಕ್ಷ್ಮಣರ ಪ್ರಭಾವ ಮನಲ್ಲಿ ತೋರ್ಪುದೊಳ್ಳಿತ್ತೆನೆ, ದಶರಥಂ ಪರೀಕ್ಷಿಸಿ ನೆಗಳ್ವೆನೆಂದು" ಪುರೋಹಿತನನ್ನು ಕೇಳುವನು. ಆತನು "ಎಂಟನೆಯ ರಾಮಕೇಶ ವರ್, ಪ್ರತಿವಾಸುದೇವಂ ರಾವಣನೆಂಬೊಂ,........ಮಣಿಮತಿಯೆಂ ಬೊಳ್ ವಿದ್ಯೆಯುಂ ಸಾಧಿಸಲೆಂದಿರ್ದಳಂ ಕಂಡು ಮೋಹವಶಗತನಾಗಿ ವಿದ್ಯಾಸಿದ್ಧಿಗೆ ವಿಘ್ನಂಮಾಡಿದ್ದುದುಂ....ನಿನ್ನ ಮಗಳಾಗಿ ನಿನಗೆ ವಧಾ ರ್ಥಮಪ್ಪೆನಕ್ಕೆಂದು ನಿಧಾನಂಗೆಯ್ದು ಮಂಡೋದರಿಯ ಗರ್ಭದಿಂದ ವತರಿಸು"ವಳು. ಮಂಡೋದರಿ ಮಂದಸಿನಲ್ಲಿಕ್ಕಿ ಮಿಥುಳಾನಗರದ ಪರೇತವನದಲ್ಲಿ ಹೂಳಿಸಲು, ಯಜ್ಞಕ್ಕೆ ನೆಲವನ್ನು ಶೋಧಿಸುವಾಗ ಸಿಕ್ಕಿ, ಸೀತೆಯೆಂಬ ಹೆಸರನ್ನು ಪಡೆಯುವಳು. "ಜನಕನ ಯಜ್ಞ ಪ್ರಪಂಚಮುಂ ದಶಗ್ರೀವಂ ಕೇಳ್ದು ಬಾರದನ್ನೆಗಂ ರಾಮಂಗೆ

---

§ ಮೈಸೂರು ಯೂನಿವರ್ಸಿಟಿ, ಓರಿಯಂಟಲ್ ಲೈಬ್ರರಿ, ಕೈಬರೆಹದ ಪುಸ್ತಕ (K. A. 66) ಪುಟಗಳು ೨೯೨—೩೩೪)

ಸೀತೆಯುಂ ಕುಡುಗುಂ" ಎಂದು ಹೇಳುವನು. ಅದರಂತೆ ವಿವಾಹವಾಗುವುದು. ದಶರಥನು "ರಾಮಂಗಧಿರಾಜಮಣಿಮಕುಟಮಂ ಕವಿದು, ಲಕ್ಷ್ಮಣಂಗೆ ಯುವರಾಜಪಟ್ಟಮುಂ ಕಟ್ಟಿ" ವಾರಣಾಸಿಯಲ್ಲಿ ರಾಜ್ಯಭಾರಮಾಡುವಂತೆ ಇರಿಸುವನು. ಅಲ್ಲಿ ಅವರು "ಅರಸುಗೆಯ್ಯುತ್ತಿರ್ಪಿನಂ" ರಾವಣಂ ಲಂಕಾಧಿಷ್ಠಾನನುಪ್ಪ ದಕ್ಷಿಣಭರತತ್ರಿಖಂಡಕ್ಕೆಲ್ಲಮಧಿಪನೆಂಬಭಿಮಾನದಿಂ" ಇರಲು, ನಾರದನು "ನಿನ್ನನುಳಿದೆ" ರಾಮನಿಗೆ ಜನಕನು ಸೀತೆಯನ್ನು ಕೊಟ್ಟನು; "ಆಕೆ ನಿನಗೆ ಯುಕ್ತಳ್" ಎಂದು ಹೇಳುವನು. ರಾವಣನು "ಮನೋಜತಾಪಮೊದವಿ" "ಭೂಮಿಗೋಚರಂಗೆ ಸ್ತ್ರೀರತ್ನಮೇವುದೆ ಪಿಡಿದು ತರ್ಪೆನೆಂದು ನುಡಿಯೆ" "ನಾರದಂ ಅವರ್ಗಭಿವೃದ್ಧಿ ಕಾಲಂ, ಅವರೊಳ್ ವಿಗ್ರಹಂಗೆಯ್ವುದು ನಿನಗೊಳ್ಳಿತಲ್ತು" ಎಂದು ನುಡಿಯುವನು. ರಾವಣನು ಮುನಿದು ಶೂರ್ಪನಖಿಯನ್ನು ಸೀತೆಯನ್ನು ಒಡಂಬಡಿಸಿ ತಾರೆಂದು ಕಳುಹಿಸುವನು. ಆವಳು ವಾರಣಾಸಿಯ ಚಿತ್ರಕೂಟೋದ್ಯಾನಕ್ಕೆ ಹೋಗಿ, ಮುದುಕಿಯ ವೇಷವನ್ನು ತಾಳಿ ಸೀತೆಗೆ ಬೋಧಿಸಿ ನೋಡಿ, ಆವಳ ಶೀಲಕ್ಕೆ ಮೆಚ್ಚಿ ಹಿಂದಿರುಗಿ ಬಂದು ರಾವಣನಿಗೆ ಬುದ್ಧಿ ಹೇಳುವಳು. ರಾವಣನು ಕೇಳದೆ, ಮಾರೀಚನೊಡನೆ ಪುಷ್ಪಕವಿಮಾನವನ್ನೇರಿ ವಾರಣಾಸಿಗೆ ಬಂದು ಮಾಯಾಮೃಗವ್ಯಾಜದಿಂದ ಸೀತೆಯನ್ನು ಅಪಹರಿಸುವನು. ಲಂಕಾವನದಲ್ಲಿ ಸೀತೆ ಅನಶನವ್ರತವನ್ನು ತಾಳುವಳು. ರಾಮನು ದುಃಖಿಸುತ್ತಿರಲು, ದಶರಥನಟ್ಟಿದ ದೂತನು ಬಂದು ಪುರೋಹಿತನಿಂದ ರಾವಣನು ಸೀತೆಯನ್ನು ಕದ್ದುಕೊಂಡು ಹೋದನೆಂಬುದನ್ನು ತಿಳಿದೆನೆಂದು ಹೇಳುವನು. ಅಲ್ಲಿಗೆ ಭರತ ಶತ್ರುಘ್ನರೂ, ಸುಗ್ರೀವ ಹನುಮಂತರೂ ಬಂದು ಸೇರುವರು. ಸುಗ್ರೀವನೂ ನಾರದರಿಂದ ಎಲ್ಲವನ್ನೂ ತಿಳಿದು ರಾಮನಿಗೆ ಸಹಾಯಮಾಡಿ, ತನ್ನ ರಾಜ್ಯವನ್ನು ಪಡೆಯಬೇಕೆಂದು

ಒಂದೆನೆಂದು, ವಾಲಿಯ ಕಥೆಯನ್ನು ತಿಳಿಸುವನು. ಹನುಮಂತನು ಮುದ್ರಿಕೆಯನ್ನು ಕೊಂಡು ಗಗನಗಾಮಿನೀವಿದ್ಯೆಯಿಂದ ಲಂಕೆಗೆ ಹೋಗಿ ಸೀತೆಯನ್ನು ಸಮಾಧಾನಮಾಡಿಬರುವನು. ಮಂಡೋದರಿಯೂ ಮಗಳೆಂದು ತಿಳಿದು ಸಂತೈಸುವಳು. ಮತ್ತೆ ಅಯೋಧ್ಯಾನಗರಿಯಿಂದ ರಾಮನು "ವಿಭೀಷಣನಂ ನಮಗೆ ಮಾಡ್ಪುದು; ಆತಂ ನಮಗಾಗೆ ರಾವಣನ ಲಕ್ಷ್ಮಿಯೆ ನಮಗಾದಳ್" ಎಂದು ಹನುಮಂತನನ್ನು ಕಳುಹಿಸುವನು. ವಿಭೀಷಣನ ಬುದ್ಧಿವಾದ; ರಾವಣನ ಕೋಪ; ಲಕ್ಷ್ಮಣನಿಂದ ವಾಲಿಯ ವಧೆ; ಕಿಷ್ಕಿಂಧದಲ್ಲಿ ಬೀಡು; ಲಂಕೆಯ ಮುತ್ತಿಗೆ. ಹನುಮಂತನು ಲಂಕೆಗೆ ನುಗ್ಗಿ ರಾವಣನನ್ನು ಹೊರಡಿಸುವುದಕ್ಕೆ ಲಂಕೆಯನ್ನು ಸುಡುವನು. ಅದಕ್ಕೆ ಮುಂಚೆಯೇ ಹೊರಗೆ ಹೋಗಿದ್ದ ರಾವಣನು ವಿದ್ಯೆಯನ್ನು ಸಾಧಿಸಿ ಬಂದು ಯುದ್ಧಮಾಡಿ ಲಕ್ಷ್ಮಣನ ಚಕ್ರದಿಂದ ಮಡಿಯುವನು. ರಾಮನು ವಿಭೀಷಣನಿಗೆ ಪಟ್ಟವನ್ನು ಕಟ್ಟಿ, ದಿಗ್ವಿಜಯ ಮಾಡಿ, ಚಕ್ರವರ್ತಿಯಾಗಿ, "ಶಿವಗುಪ್ತ ಕೇವಲಿಗಳಂ ಬಂದಿಸಿ ಧರ್ಮಮಂ ಕೇಳ್ದು" "ಸಮ್ಯಕ್ತ್ವಾದಿಗಳಲ್ಲದೆ ಧರ್ಮಾನುರಾಗ ಮಾತ್ರಂ ಕೆಲವುಕಾಲ ಮಿರ್ದು ಭರತ ಶತ್ರುಘ್ನರಂ ಸಾಕೇತದೊಳಿರಿಸಿ, ತಾಮಿರ್ವರುಂ ವಾರಣಾಸಿಗೆ ಪೋಗಿ ಸುಖಮಿರ್ದು", ಲಕ್ಷ್ಮಣನು ಸಾಯಲು ಅಜಿತಂಜಯನಿಗೆ ಪಟ್ಟವನ್ನು ಕಟ್ಟಿ, ತಾನೂ ಸೀತೆಯೂ ದೀಕ್ಷೆಯನ್ನು ಸ್ವೀಕರಿಸುವರು. ಸುಗ್ರೀವಾದಿಗಳೂ ತಪಸ್ಸನ್ನು ಕೈಕೊಳ್ಳುವರು. "ರಾಮಮುನಿಯುಂ, ಅಣುವನುಂ ಮುಕ್ತಿಗೆ ಸಂದರಾ". ಸೀತೆ ಅಚ್ಯುತಕಲ್ಪದಲ್ಲಿ ಹುಟ್ಟಿದಳು. "ಲಕ್ಷ್ಮಣನುಂ ನರಕದಿಂ ಬಂದು ಕ್ರಮದಿಂ ಮೋಕ್ಷಗಾಮಿಯಪ್ಪಂ"

ನಾಗಚಂದ್ರನು ಸಂಸ್ಕೃತ, ಕನ್ನಡ ರಾಮಾಯಣಗಳು ಯಾವ ಯಾವುವನ್ನು ನೋಡಿ, "ಗೌತಮಂ ಗಣಾಗ್ರಣಿ ಮಗಧಾಧಿಪಂಗೆ

ಪೇೞ್ದುದನ್ **ಅಪೂರ್ವ**ಮೆನೆ'' ಅಭಿವರ್ಣಿಸಿದನೋ (ರಾಮ. ೧. ೪೨), ಮತ್ತು "ಪಿರಿದೆನಿಸಿರ್ದ ರಾಮಕಥೆಯಂ ಕಿಱಿದಾಗಿರೆ. . ಸೇರ್ಪು ವೆತ್ತಿರಲ್ **ಅವಿರೋಧ**ಮಾಗೆ'' ಹೇಳಿದನೋ–ಇಟ್ಟುಕೊಂಡದ್ದೇನೋ ಬಿಟ್ಟದ್ದೇನೋ, ಹೊಸದಾಗಿ ಸೇರಿಸಿದ್ದೇನೋ—ಈ ಅಂಶಗಳನ್ನು ಚೆನ್ನಾಗಿ ಪರಿಶೋಧಿಸಬೇಕು. ಆಗ್ಗೆ ಆತನ ಕಥಾರಚನೆಯ ಶಕ್ತಿ ಹೊರಪಡುವುದು.

ಸದ್ಯಕ್ಕೆ ಈ ಕಾವ್ಯದಲ್ಲಿ ಹಾಸುಹೊಕ್ಕಾಗಿರುವ ಜೈನ ಭಕ್ತಿ, ಜ್ಞಾನವೈರಾಗ್ಯಗಳ ವಾತಾವರಣವನ್ನಾಗಲಿ, ಅತಿಯಾದ ಶೃಂಗಾರ ರಸಲೋಲುಪ್ತಿಯ ಅಭಾವವನ್ನಾಗಲಿ, ಮಿತವಾದ ಹಿತವಾದ ವರ್ಣನಾಸಂಪತ್ತಿಯನ್ನಾಗಲಿ, ತಿಳಿಯಾದ, ಬಿಗಿಯಾದ, ಇಂಪಾದ ಕನ್ನಡನುಡಿಗಳ ಸರಳಸಹಜಶೈಲಿಯನ್ನಾಗಲಿ, ವಿಚಾರಮಾಡುವು ದಕ್ಕೆ ನಾನು ಅವಕಾಶವನ್ನು ಬೇಡುವುದಿಲ್ಲ. ನಾಗಚಂದ್ರನ ಚರಿತ್ರ ದೃಷ್ಟಿಯನ್ನು ಕುರಿತು ಒಂದೆರಡು ಮಾತು ಹೇಳಿ, ಆತನ ಪಾತ್ರ ಸೃಷ್ಟಿಯ ಉದಾತ್ತಭಾವವನ್ನು ತೋರಿಸುವುದಕ್ಕೆ ರಾವಣನ ಪಾತ್ರದ ವಿವರಣೆಯೊಂದನ್ನು ಮಾಡುತ್ತೇನೆ. ರಾವಣನು ದುಷ್ಟ, ಲೋಕ ಕಂಟಕ, ಪರಾಂಗನಾಸಕ್ತ: ಇದು ಆ ಹೆಸರಿಗೆ ಅಂಟಿಬಂದ ಮಾತು. ಆತನಿಗೆ "ಸುಣ್ಣಬಳಿ''ಯುವ ಆವಶ್ಯಕತೆಯೇನೂ ಇಲ್ಲ. ಆದರೂ "ಮಸಿ'' ಬಳಿಯುವ ಕಾರ್ಯವೇ "ಕಲಾಕರ್ಮ''ವೆಂಬ ಭಾವ ನಾಗ ಚಂದ್ರನಿಗೆ ಇದ್ದಂತೆ ಕಾಣುವುದಿಲ್ಲ. ಆತನದು "ಉದಾತ್ತ'' ಪ್ರಕೃತಿ ಯಲ್ಲವೆ? ದಯಾರ್ದ್ರಹೃದಯವಲ್ಲವೆ ?

ನಾಗಚಂದ್ರನು ಕಲೋಪಾಸಕ, ಜಿನೋಪಾಸಕ. ಆದರೂ ಲೌಕಿಕಜ್ಞಾನವನ್ನೂ ವೈಭವವನ್ನೂ ನೋಡಿದವನು. ತನ್ನ ಕಾಲದ ದೇಶಸ್ಥಿತಿಯನ್ನೂ, ರಾಜನೀತಿಗಳನ್ನೂ, ರಾಜಿಕಪುರುಷರ ಗುಣಾವ ಗುಣಗಳನ್ನೂ ಮನಸ್ಸಿನಲ್ಲಿಯೇ ವಿಮರ್ಶೆಮಾಡಿದವನು. ಚಕ್ರಾಧಿ

ಪಾತ್ರಗಳ ಏಳುಬೀಳುಗಳನ್ನೂ, ಕಾಲವಶದಿಂದ, ಕರ್ಮವಶದಿಂದ, ಎಂತೆಂತಹ ಮಹಾಪುರುಷರೂ ಉರುಳಿಹೋಗಿರುವುದನ್ನೂ ಅನುಭವಕ್ಕೆ ತಂದುಕೊಂಡವನು. ಶ್ರೀರಾಮನನ್ನು, ಧರ್ಮಪುರುಷನನ್ನು, ರಾಮಚಿನನನ್ನು ಸ್ತೋತ್ರಮಾಡುವ ಪುರಾಣದಲ್ಲಿ, ಪ್ರತಿವಾಸುದೇವನಾದ, ಶಲಾಕಾಪುರುಷನಾದ, ಮುಂದೊಮ್ಮೆ ಮೋಕ್ಷಕ್ಕೆ ಸಲ್ಲುವವನಾದ ರಾವಣನ ವ್ಯಕ್ತಿಯನ್ನು ನಿಷ್ಪಕ್ಷಪಾತದಿಂದಲೂ, ಸಮಾಧಾನ ಚಿತ್ತದಿಂದಲೂ, ಕಾರುಣ್ಯದೃಷ್ಟಿಯಿಂದಲೂ ಸೃಷ್ಟಿಸಿದ್ದಾನೆ. ರಾವಣನೆಂದರೆ ಅಸಹ್ಯಪಟ್ಟುಕೊಳ್ಳುವುದು ಕರ್ತವ್ಯವೆಂದು ಭಾವಿಸುವವರು ಈ ಸಹಾನುಭೂತಿಯ ಸೌಂದರ್ಯಕ್ಕೆ ಸ್ವಲ್ಪ ಚಿತ್ತವನ್ನು ಕೊಡಬೇಕು. ಪಂಪನ ದುರ್ಯೋಧನ, ರನ್ನನ ದುರ್ಯೋಧನ, ಅಭಿನವಪಂಪನ ರಾವಣ ಇವರು ಮೂವರೂ ಉಗ್ರಪ್ರಕೃತಿಗಳು, ರುದ್ರನಾಟಕದ ನಾಯಕರು, ಕನ್ನಡ ಕಾವ್ಯಗಳಲ್ಲಿ ಕಲಾದೃಷ್ಟಿಯಿಂದ ಅತ್ಯುನ್ನತ ಪಾತ್ರಗಳು; ಉದಾತ್ತರಹೃದಯದಲ್ಲಿ ಉದ್ಭವವಾದವರು. ಸಂಪ್ರದಾಯವೂ, ಶಾಸ್ತ್ರವೂ ಬಿಗಿಕಟ್ಟಾದ ಸಮಾಜದಲ್ಲಿ ಈ ಸೃಷ್ಟಿ ಆಶ್ಚರ್ಯಕರ—ಆದರೆ ಪ್ರಪಂಚದ ಮಹಾಕವಿಗಳೆಲ್ಲಾ ಒಂದೇ ಹುಟ್ಟೆಂದು ತೋರಿಸುವ ಶುಭಚಿಹ್ನೆ.

ಕವಿಯ ಕಣ್ಣಿನಲ್ಲಿ, ಉತ್ತರಭರತದಲ್ಲಿ ಅಯೋಧ್ಯೆ ಅಥವಾ ಕೋಸಲ. ಅಲ್ಲಿ ಆಳುವವರು ಸೂರ್ಯವಂಶದ ರಾಜರು. ಅವರಲ್ಲಿ ಅನರಣ್ಯನೆಂಬವನು ರಾವಣನು ಮಾಹಿಷ್ಮತಿಯ ರಾಜನನ್ನು ಗೆದ್ದನೆಂದು ಕೇಳಿ ಒಂದು ತಿಂಗಳ ಮಗುವಾದ ದಶರಥನಿಗೆ ಪಟ್ಟವನ್ನು ಕಟ್ಟಿ ದೀಕ್ಷೆಗೊಳ್ಳುವನು. (೨, ೨೩-೨೬). ಎತ್ತಿಕೊಳ್ಳುತ್ತಲೇ ಪ್ರತಿನಾಯಕನ ದಿಗ್ವಿಜಯದ ಮಾತು. ವಿದೇಹ ಅಥವಾ ಮಿಥಿಲದಲ್ಲಿ ರಾಜ ಜನಕ; ದಶರಥನ ಮಗ, ಜನಕನ ಮಗಳು ಇವರಿಂದ ರಾವಣನು ಸಾಯುವನೆಂಬ ಒಂದು ಭವಿಷ್ಯದ್ವಾಣಿ. ಅದನ್ನು

ತಪ್ಪಿಸಲು ವಿಭೀಷಣನು ಕೊಲೆಗಾರರನ್ನು ಕಳುಹಿಸಿದರೆ ನಾರದರ ಎಚ್ಚರಿಕೆಯಿಂದ ತಂದೆಗಳಿಬ್ಬರೂ ತಪ್ಪಿಸಿಕೊಳ್ಳುವರು.

ಇದು ನೈಮಿತ್ತಿಕಾದೇಶ—

ವನಮಂ ತೊಡಳಿಲ್ಲಿಡುವ ಶಿ

ಲಾನಿಕ್ಷಿಪ್ತಾಕ್ಷರಂ, ವಿಭೀಷಣ, ರಣದೊಳ್

ಜಾನಕಿಯು ದೂಸದಿಂ ಲಂ

ಕಾನಾಥಂ ದಾಶರಥಿಯು ಕಯ್ಯೊಳ್ ಮಡಿಗುಂ. (೩. ೨೩).

ಅದಕ್ಕೆ ವಿಭೀಷಣನು ಮನುಷ್ಯಬುದ್ಧಿಯನ್ನು ಉಪಯೋಗಿಸಿ—

ಕಾರಣವಿಘಟನನೆ ಕಾರ್‍ಯವಿಘಟನಮಲ್ತೇ? (೩. ೨೪.)

ಎಂದು ದಶರಥ ಜನಕರ ಮರಣವನ್ನು ಹೂಡುವನು. ಆದರೆ—

ಕೊಲಲಾರ್ಪರೆ ನಾಯುದರಂ

ಲಲಾಟದೊಳ್ ವಿಧಿಯು ಬರೆದ ಲಿಪಿ ಜಲಲಿಪಿಯೇ?

(೩. ೩೧).

ರುದ್ರನಾಟಕದ ಮೊದಲ ಬೀಜ, ವಿಧಿ. ರಾವಣನ ದಿಗ್ವಿಜಯದ ಮಾತೂ ಆಯಿತು; ವಿಧಿಯ ವಿಲಾಸವನ್ನೂ ಕೇಳಿದ್ದಾಯಿತು.

ಮಧ್ಯಭಾರತದಲ್ಲಿ ರಥನೂಪುರ ಚಕ್ರವಾಳಪುರ, ವಿದ್ಯಾಧರ ಅಥವಾ ಖೇಚರ ರಾಜರ ರಾಜಧಾನಿ. ಇದರ ರಾಜನಾದ ಇಂದ್ರನು ದಕ್ಷಿಣಭರತಚಕ್ರವರ್ತಿ. ಇನ್ನೂ ಕೆಳಗೆ ಕಿಷ್ಕಿಂಧ. ಇದರ ರಾಜರಿಗೂ ರಾವಣನ ವಂಶಕ್ಕೂ ಮೈತ್ರಿ, ಬಾಂಧವ್ಯ. ದಕ್ಷಿಣಸಮುದ್ರದಲ್ಲಿ ಲಂಕಾದ್ವೀಪ. ಲಂಕೆಯ ಭೀಮರಾಕ್ಷಸನು (ಇವನು ರಾಕ್ಷಸನಲ್ಲ, ಆ ವಂಶದ ಹೆಸರು ಅದು) ರಥನೂಪುರದ ತೋಯದವಾಹನನನ್ನು ದತ್ತುತೆಗೆದುಕೊಳ್ಳುವನು. ಕಿಷ್ಕಿಂಧದ ರಾಜರು ವಾನರಧ್ವಜರು, (೧೦. ೧೧೭ ವಚನ) ವಾನರವಂಶದವರು, ವಾನರರಲ್ಲ. ಈ ರಾಜರ ಮನೆತನಗಳಲ್ಲಿ ಒಮ್ಮೆ ಬಾಂಧವ್ಯವೂ, ಒಮ್ಮೆ ಯುದ್ಧವೂ

ನಡೆಯುತ್ತಿರುತ್ತದೆ. ರಾವಣನು ಇಂದ್ರನನ್ನು ಗೆದ್ದು, ಸುಗ್ರೀವನ ತಂದೆಯನ್ನು ಕಿಷ್ಕಿಂಧೆಯಲ್ಲಿ ರಾಜನನ್ನಾಗಿರಿಸುವನು. ಅವನ ಮಗ ವಾಲಿ ರಾವಣನಿಗೆ ತನ್ನ ತಂಗಿಯನ್ನು ಕೊಡಲಿಷ್ಟವಿಲ್ಲದೆ ಸನ್ಯಾಸಿ ಯಾಗುವನು. ರಾವಣನು "ಮದಾಂಧಂ, ಧರ್ಮಾನುಗನಲ್ಲಂ, ಉದ್ಧತಂ" (೧೦. ೧೭೦. ೧.)

ಅದಟೆಂದಾತಂಗಾಸೀ
ಯುದೆ ಕೂಸಂ, ಕಾಳೆಗಕ್ಕೆ ಮೆಯ್ದುರೆ, ಪಲಕಾ
ಲದ ರಾಕ್ಷಸವಾಸರ ವಂ
ಶದ ನಣ್ಪಿನ್ನಿಂದಮೞದುದೆಂಬುದು ಲೋಕಂ

(೧೦. ೧೭೨.)

ಪಾತಾಳಲಂಕೆಯ ರಾಜನಾದ ಖರನು ರಾವಣನ ಮೈದುನ, ಚಂದ್ರನಖಿಯ ಗಂಡ (ಶೂರ್ಪನಖಿಯಲ್ಲ); ಗಡಿಪ್ರಾಂತದ ಸರ್ವಾಧಿಕಾರಿ. ಈ ಗಡಿಗಾಳಗದಿಂದಲ್ಲವೆ ರಾಮರಾವಣರ ಕಲಹಕ್ಕೆ ಆರಂಭ? ಹನುವರದ್ವೀಪದ ಅರಸು ಹನುಮಂತನು ಸುಗ್ರೀವನ, ಮತ್ತು ರಾವಣನ ಮನೆಯ ಹೆಣ್ಣುಮಕ್ಕಳನ್ನು ಮದುವೆಯಾಗಿ ಇಬ್ಬರಿಗೂ ಬೇಕಾದವನು. ಈ ರೀತಿ ಲೋಕಚರಿತ್ರೆಯ ನಡವಳಿಕೆಗೆ ತಕ್ಕಂತೆ ಚಕ್ರವರ್ತಿ ರಾವಣನ ಮತ್ತು ಅವನ ಆಶ್ರಿತರಾಜರ ಸಂಬಂಧಗಳನ್ನು ಕವಿ ಚಿತ್ರಿಸಿರುವನು.

೧೦ನೆಯ ಆಶ್ವಾಸದಲ್ಲಿ ರಾಮಲಕ್ಷ್ಮಣರಿಗೆ ಜಾಂಬೂನದನು ರಾವಣನ ಪರಾಕ್ರಮವನ್ನೂ, ಮಿತ್ರಸಂಪತ್ತಿಯನ್ನೂ, ವಿದ್ಯಾವೈಭವವನ್ನೂ, ಉತ್ಕೃಷ್ಟ ಗುಣ ಚಾರಿತ್ರಗಳನ್ನೂ ವಿಶದವಾಗಿ ವರ್ಣಿಸುವನು. ರಾವಣನು ಹುಟ್ಟಿದಾಗ ಪಿತ್ರಾರ್ಜಿತವಾದ ರಾಜ್ಯ ತಪ್ಪಿಹೋಗಿ ಇಂದ್ರನ ಕೈಕೆಳಗೆ ವೈಶ್ರವಣನ ಸ್ವಾಧೀನದಲ್ಲಿರುತ್ತದೆ. ಭೀಮರಾಕ್ಷಸನಿಂದ ಮನೆತನಕ್ಕೆ ಬಂದ "ನವಮುಖರತ್ನಭೂಷಣದ

ಮಾಣಿಕಂಗಳೊಳಾತನ ಮುಖಂ ಪ್ರತಿಬಿಂಬಿಸೆ ದಶಮುಖನೆಂದು'' ಆತನಿಗೆ ಹೆಸರಿಡುವರು. ಆತನು ತಮ್ಮಂದಿರಾದ ಭಾನುಕರ್ಣ ವಿಭೀಷಣರೊಡನೆ ತಪಸ್ಸುಮಾಡಿ "ವಿದ್ಯೆ"ಗಳನ್ನು ಸಾಧಿಸುವನು. ವೈಶ್ರವಣನನ್ನು ಸೋಲಿಸಿ, ಮಂಡೋದರಿಯನ್ನು ಮದುವೆಯಾಗಿ, ಇಂದ್ರ, ಯಮ, ವರುಣ, ನಳಕೂಬರ ಸಹಸ್ರಬಾಹು ಮುಂತಾದ ಖೇಚರರಾಜರನ್ನು ಗೆಲ್ಲುವನು. ವಾಲಿ ತಪಸ್ಸು ಮಾಡುತ್ತಿದ್ದ ಪರ್ವತದ ಮೇಲೆ ತನ್ನ ವಿಮಾನ ನಿಂತು ಹೋಗಲು ರೋಷದಿಂದ ಪರ್ವತವನ್ನು ಎತ್ತುವುದಕ್ಕೆ ಹೋಗಿ, ಸಿಕ್ಕಿ, ಹುಯಿಲಿಟ್ಟು ರಾವಣನೆಂಬ ಹೆಸರನ್ನೂ ಪಡೆಯುವನು. ಲಂಕೆಯಲ್ಲಿ ದಕ್ಷಿಣಭರತಚಕ್ರವರ್ತಿಯಾಗಿ ಆಳುತ್ತಿರುವನು.

ಕದನಕ್ಷೋಣಿಯೊಳೋಡಿದರ್ ಮಡಿದರೆಂಬೀವಾರ್ತೆಯುಂ ಕಂಡರೆಂ
ಮದನೇಗೊಂಡರಿಖೇಚರೆಂಬ ನುಡಿಯುಂ ಭೂಭಾಗದೊಳ್ ಕೇಳಲಾ
ದುದು, ಗೆಲ್ದರ್ ನರಿಗಾದಿದರ್ ಪಗೆವರೆಂಬೀವಾರ್ತೆಯುಂ ಕೇಳಲಾ
ಗದಮಂ ವರ್ತಿಸಿದಿನಾ ಬಲೀಕ್ಕನೆ ಜಗದ್ವಿದ್ರಾವಣಂ ರಾವಣಂ.

(೧೦. ೩೬).

ಇಲ್ಲಿ ಮತ್ತೊಂದು ಆದೇಶ ತಲೆಹಾಕುತ್ತದೆ ಸಿದ್ಧಶೈಲವನ್ನು ಎತ್ತಬಲ್ಲವನು ರಾವಣನನ್ನು ಕೊಲ್ಲುವನೆಂದು ಜಾಂಬೂನದನು ಕೇಳಿರುವನು. ಲಕ್ಷ್ಮಣನು— ಸೀತೆಯನ್ನು ಕದ್ದಾಗಲೆ ಅವನ ಶೌರ್ಯ ತಿಳಿಯಿತು;

ರಾಮ ರಾವಣರ ಬಲ್ಪಂ ಮೆಲ್ಪುಮಂ ಕಾಣಲಪ್ಪುದು ಘಟ್ಟೊತ್ತಿ
ಪೀವಲ್ಲಿ, ದಿಟ್ಟಿದೊಲೆಯಿಂ ತೂಗಿಂ ರಣಕ್ಷೋಣಿಯೊಳ್

(೧೦. ೨೩೨).

ಎಂದು ಧಿಕ್ಕರಿಸಿ, ಸಿದ್ಧಶೈಲವನ್ನೆತ್ತುವನು! (೧೧. ೭–೮).

ಹೀಗೆ ಮಹಾಚಕ್ರವರ್ತಿಯು, ಜಗದ್ವಿದ್ರಾವಣನ ಬೆನ್ನಿನಲ್ಲಿ ಕಾದಿದ ಪಥ!

ರಾವಣನ ರಾಜನೀತಿ ತನ್ನ ಗೆದ್ದ ಆಶ್ರಿತರಾಜರನ್ನು ಮರ್ಯಾದೆಯಿಂದ ಕಂಡು ಬಾಂಧವ್ಯವನ್ನು ಬೆಳಸಿ ಅವರನ್ನು ಭೀತಿಯುಳ್ಳಿಟ್ಟುಕೊಂಡಿರುವುದರಲ್ಲಿ ಕಾಣುವುದು. ಉದಾಹರಣೆಗಾಗಿ, ಇಂದ್ರ, ಸಹಸ್ರಬಾಹುಗಳನ್ನು ಮತ್ತೆ ಸಿಂಹಾಸನವನ್ನೇರಿಸಿದುದಲ್ಲದೆ: ವರುಣನಿಗೆ ಹೇಳುವುದು ನೋಡಿ:

ಕಲಿಸಾವಂ, ಪಿಡಿವಡೆವಂ,
ಕಲಹದೊಳಿದು ಭಂಗಮಲ್ತು; ನೀನ್ ಮುನ್ನಿನವೋಲ್
ನೆಲಸಿರ್ದುದು ನಿಜರಾಜ್ಯದೊ
ಳೊಲವಿಂದೆಂದೊಸೆದು ವರುಣನಂ ಮನ್ನಿಸಿದಂ. (೧೦. ೨೨೦).

ಮನ್ನಿಸಿ, ಅವನ ಮಗಳನ್ನು ಮದುವೆಯಾಗುವನು.

“ರಾಜಾನೋ ಬಹುವಲ್ಲಭಾಃ” ರಾವಣನು ಎಷ್ಟೋಮಂದಿ ರಾಜಕುಮಾರಿಯರನ್ನು ಮದುವೆಯಾಗುವನು. (ರಾಮನೂ, ಈ ಕಾವ್ಯದಲ್ಲಿ). ಮಂಡೋದರಿ ಪಟ್ಟಮಹಿಷಿ. ರಾವಣನು ಅನಂತವೀರ್ಯಕೇವಲಿಗಳಿಂದ ಪರವಧೂವಿರತಿವ್ರತವನ್ನು ಸ್ವೀಕರಿಸಿರುವನು; (೯. ೧೪೯, ೧೧೪). ಪರಿಪಾಲಿಸುತ್ತಿರುವನು: ಇದನ್ನು ಕವಿ ನಳಕೂಬರನ ಪತ್ನಿ ಉಪರಂಭೆಯ ವೃತ್ತಾಂತದಲ್ಲಿ ಚೆನ್ನಾಗಿ ಬಿತ್ತಿ ಹೇಳಿರುವನು. (೧೦. ೧೮೭–೧೯೬). ರಾವಣನು ನಳಕೂಬರನ ಊರನ್ನು ಮುತ್ತುವನು. ರಾವಣನ ಕೀರ್ತಿಯನ್ನು ಕೇಳಿ ಮೋಹಗೊಂಡಿದ್ದ ಉಪರಂಭೆ ಕೋಟೆಯ ರಹಸ್ಯವನ್ನು ತನ್ನನ್ನು ಒಲಿದರೆ ತಿಳಿಸುವುದಾಗಿ ಹೇಳಿಕಳುಹಿಸಲು, ರಾವಣನು “ಪಳಿಯುಂ ಪಾಪಮುಮಪ್ಪ ದುಶ್ಚರಿತ್ರಮನೇನೆನೆಂದು ನಿಶ್ಚಯಿಸಿ, ವಿಭೀಷಣಂಗೆ

ಪೇಳ್ವುದುಂ, ಆತಂ ವಿದ್ಯಾಪ್ರಾಕಾರಮುಂ ಕಿಡಿಸುವಂತುಟಂ ಪ್ರತಿವಿದ್ಯೆಯುಮನಾಕೆಯುಂ ಬರಿಸಿ ಪುಸಿದು ನಂಬಿಸಿ ಕಲ್ತುಕೊಳ್ವುದೆನೆ, ರಾವಣಂ ಆಕೆಯುಂ ತಾಯೆಂದು ವಕ್ರೋಕ್ತಿಯಿಂ ನುಡಿವುದುಂ" ಆಕೆ ಬಂದು, ಕೋಟೆಯನ್ನು ಹಿಡಿದಮೇಲೆ,

"ರಾವಣಂ ರಹಸ್ಯದಿಂದಾಕೆಯುಂ ಕರೆದು, ನೀನ್ ವಿಶುದ್ಧಕುಲದ ಕುಶಧ್ವಜಂಗಂ ಮಧುಕಾಂತೆಗಂ ಪುಟ್ಟಿದುದರಿಂ ನಿಜಕುಲಾಚಾರಮುಮಂ ಬಗೆದು ಶೀಲಪರಿಪಾಲನಂ ಮಾಳ್ಪುದು; ಅಂತಲ್ಲದೆಯುಂ ನೀನೆನಗೆ ವಿದ್ಯೋಪದೇಶಂಗೆಯ್ದುದರಿಂ ಗುರುವಾದೆ; ಪರಿತೋಷಮುಮಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮುಮಂ ಪತ್ತುವಿಡಿಸಿ—

ನಳಕೂಬರನುಮನಾ ಕ್ಷಣ
ದೊಳೆ ಬರಿಸಿ ನಿಜಾಗ್ರತನಯನಿಂದಗಿಯಿಂದ
ಗ್ಗಳಮೆನೆ ಮನ್ನಿಸಿ ಭಯಮುಮಂ
ಕಳೆದಿತ್ತಂ ಭೃತ್ಯಪದವಿಯುಂ ದಶವದನಂ. (೧೦. ೧೯೬).

ಈ ರಾವಣಚಕ್ರವರ್ತಿ ರಾಜತಂತ್ರಜ್ಞನೂ ಅಹುದು, ಸೌಜನ್ಯವ್ರತನಿಷ್ಠನೂ ಅಹುದು!

ಆದರೂ ಯಾವ ಗಳಿಗೆಗೆ ಹೇಗೋ ಮಾನವಪ್ರಕೃತಿ! ಯಾವ ಸೂಕ್ಷ್ಮದಲ್ಲಿ ಯಾವ ವಿಷಕ್ರಿಮಿಯೋ, ಕಾಲವೂ, ಕರ್ಮವೂ, ವಿಧಿಯೂ ಕಾದಿರುವಾಗ! ಜಾನಕಿಯ ದೆಸೆಯಿಂ ಸಿದ್ಧಶೈಲವನ್ನೆತ್ತಿದ ದಾಶರಥಿಯಿಂದ (ಲಕ್ಷ್ಮಣನಿಂದ) ಮಡಿದೇ ತೀರಬೇಕಲ್ಲವೆ ರಾವಣ? ವಿಧಿ ರಾಮನನ್ನೂ, ಲಕ್ಷ್ಮಣನನ್ನೂ, ಸೀತೆಯನ್ನೂ, ರಾವಣನನ್ನೂ ಹತ್ತಿರಹತ್ತಿರಕ್ಕೆ ತಳ್ಳುತ್ತಿತ್ತು. ಏಕೆಂದರೆ, ಇಷ್ಟು ಹೊತ್ತಿಗೆ ಕೈಕೆಯ ವರಕ್ಕಾಗಿ ರಾಮನು ವನವಾಸಕ್ಕೆ ಬಂದಿದ್ದನು.

ಒಂದು ದಿನ ವರ್ತಮಾನ ಬರುತ್ತದೆ ರಾವಣನ ಆಸ್ಥಾನಕ್ಕೆ—

ಖರನಿಂದ: ತಪಸ್ಸು ಮಾಡುತ್ತಿದ್ದ ತನ್ನ ಮಗ, ರಾವಣನ ಸೋದರ-ಳಿಯ, ಶಂಭೂಕನನ್ನು ರಾಮಲಕ್ಷ್ಮಣರು ಕೊಂದರೆಂದು; ಚಂದ್ರನಖಿಗೆ ಅಪಮಾನ ಮಾಡಿದರೆಂದು; ಕಾಳಗವಾಗಿ ಖರನ ಸೇನೆ ಹಿಮ್ಮೆಟ್ಟುತ್ತಿರುವುದೆಂದು—ಚಕ್ರವರ್ತಿಯ ಸಹಾಯ ಕೂಡಲೇ ಬೇಕೆಂದು· ಹೊತ್ತಿತು ಬೆಂಕಿ, ರಾವಣನನ್ನು ರಾಗಾಂಧಪಶುವನ್ನಾಗಿ ಮಾಡಿ ಸುಟ್ಟುಬಿಡುವ ಬೆಂಕಿ!

"ರಾವಣಂ ಖರದೂಷಣರಟ್ಟಿದ ಸುದ್ದಿಯಂ ಕೇಳ್ದು, ಶಂಭುಕನ ಸಾವಿಂಗಱಿಲ್ದು, ಕಡುಮುಳಿದು, ಸಂವರ್ತಸಮಯದ ಸಮುದ್ರದಂತೆ ಕದಡಿ,....ದುರ್ಜಯಂ....ಕದನ ಮದೋದ್ಧತಂ........ಎಲ್ದಿನಾ ಅಸ್ತಮಿತ ಪುಣ್ಯದಶಾನನನ್ ಆ ದಶಾನನನಾ" ಅಸ್ತಮಿತ ಪುಣ್ಯ ದಶಾನನ—ಈ ಕವಿಯ ಭಾವಗರ್ಭಿತವಾದ, ಸಮಯೋಚಿತವಾದ, ಅನುಕಂಪಾಪೂರಿತವಾದ, ಮುತ್ತಿನ ಮಣಿಯಂತಹ ಮಾತನ್ನು ನೋಡಿ. ಹತ್ತು ಕಟ್ಟುವಕಡೆ ಒಂದು ಮುತ್ತು ಕಟ್ಟು ಎನ್ನುವುದು ಇಂತಹ ಪ್ರತಿಭೆಗೇ ಅಲ್ಲವೆ?

ಪ್ರಳಯಕಾಲದ ಸಮುದ್ರದಂತೆ ಕದಡಿದ ರಾವಣ! (ತನಗೇ ಪ್ರಳಯ!) ಹಾರಿದ: ಪುಷ್ಪಕವಿಮಾನದಲ್ಲಿ ದಂಡಕಾರಣ್ಯಕ್ಕೆ! ಕಂಡ! "ತಣ್ಬುಱಿಲ ತಾಣದೊಳ್ ಬಱಿಸಿಡಿಲ ಬಱಿವಿಡಿದು ಪೊಳೆವ ಕುಡುಮಿಂಚಿನಂತೆ ಬಲಭದ್ರನ ಕೆಲದೊಳಿರ್ಪ ಸೀತೆಯಂ". ವಿಧಿಯ ಕೆಲಸ ಮುಗಿಯಿತು: ಯಾವ ವಿಷಕ್ರಿಮಿಯನ್ನು ಗುರುಗಳು ದಿವ್ಯಜ್ಞಾನದಿಂದ ಕಂಡು ವ್ರತಶಿಕ್ಷೆಯನ್ನು ದಯಪಾಲಿಸಿದ್ದರೋ ಆ ವಿಷಬೀಜ ಚೇತರಿಸಿಕೊಂಡಿತು!—

ಬಲೆ ದೃಷ್ಟಿಗೆ, ವಜ್ರದ ಸಂ
ಕಲೆ ಹೃದಯಕ್ಕೆನಿಪ, ರೂಪವತಿ ಜಾನಕಿ ಕ

ಣ್ಬೊಲದೊಳಿರೆ, ಪದ್ಮಪತ್ರದ
ಜಲಬಿಂದುವಿನಂತೆ ಚಲಿತಸೂದುದು ಚಿತ್ತಂ (೯. ೭೬).

ಇಷ್ಟು ದಿವಸದ ವ್ರತವೂ ಒಂದು ಕ್ಷಣದಲ್ಲಿ ಊದಿಯು ಹೋಮವಾಯಿತು. ಇದುವರೆಗೂ ದಕ್ಕದಿದ್ದವಸನ್ನು ಕಾಮನು ದಕ್ಕಿಸಿಕೊಂಡನು.

ಶೃಂಗಾರಸಮುದ್ರಮಂ ಕಡೆಯೆ ಹೃದ್ಭವನ್ ಉದ್ಭವೆಯಾದಳೆಂದು ಕ
ಣ್ಣಾರೆ ದಶಾಸ್ಯನೀಕ್ಷಿಸಿದನ್, ಈಕ್ಷಿಸಿ ಕಣ್ಣಿಟೀದಾರೆ ಮನ್ಮಥನ್:
ಪಲರುಂ ವಿದ್ಯಾಧರಸ್ತ್ರೀಯರು ಮುಮುರಿಯರುಂ ಮಾನಸಸ್ತ್ರೀಯರುಂ ತ
ಮ್ಮೊಲಸಂ ಮೇಲ್ವಾಯ್ದೊಡಂ ಮುಂಬಗೆಯದ ಒಗೆಯೇನಾದುದೆಂದುದ್ಧತಂ ಮೂ
ದಲಿಸುತ್ತುಂ ರೂಪಿನೊಳ್ ಮುಚ್ಚರಿಸುವನೆನಗೆಂದೆಬನಂಬುಟ್ಟುವನ್ನಂ
ಪಲಕಾಲಕ್ಕೇನುವೆತ್ತುಂ ದಶಮುಖನೆನುತುಂ ಮನ್ಮಥಂ ಮಾಣದೆಚ್ಚಂ
ಎಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ
ಕಾಂತಾರತ್ನಕ್ಕೆ ವೈದೇಹಿಗೆ ಮಕುಟಪಟದ್ರತ್ನದಿಂದರ್ಘ್ಯಮಿತ್ತಂ.
(೯. ೮೨-೪).

ಈ ವಿಷಮಸ್ಥಿತಿಗೆ ಕವಿಯೂ ಆಶ್ಚರ್ಯಗೊಂಡು ಸಂತಾಪಪಡುವನು—

ವಿಹಿತಾಚಾರಮನನ್ವಯಾಗತಗುಣಪ್ರಖ್ಯಾತಿಯಂ ದುಷ್ಟನಿ
ಗ್ರಹ ಶಿಷ್ಟಪ್ರತಿಪಾಲನಕ್ಷಮತೆಯಂ ಕೈಗಾಯುದನ್ಯಾಂಗನಾ
ಸ್ಪೃಹೆಯಂ ತಾಳ್ದಿಪನಲ್ತೆ ಕಾಳವಶದಿಂ ಲಂಕೇಶ್ವರಂ! ವಿಸ್ಮಯಾ

ಮಹವಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ
ದಾಂಟದೇ! (೮೬)

ಈ ಪದ್ಯಗಳಲ್ಲಿ ಇಟ್ಟಿರುವ ರಾವಣನ ಗುಣಸ್ಥಾನವನ್ನು ನೋಡಿ.

ಬಳಿಕ ರಾವಣನು ತನ್ನ ಅವಲೋಕಿನೀವಿದ್ಯೆಯನ್ನು ಬರಮಾಡುವನು—ಕೆಟ್ಟಕೆಲಸಕ್ಕೆ.

ಆತ್ಮಸತ್ವಗುಣಹಾನಿಯೆ ಸೂಚಿಸದೇ ವಿನಾಶಮಂ? (೮೬)

ಆ ವಿದ್ಯೆ—

ಅನ್ನೆಯದಿಂ ನಡೆವವರಂ
ನೀನ್ ನಿಯಮಿಸುವೈ, ದಶಾಸ್ಯ, ಪೆಱನಾವಂ ನಿ
ನ್ನನ್ ನಿಯಮಿಸುವಂ, ಮುನ್ನೀರ್
ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ! (೯೨)

ಎಂದು ಬುದ್ಧಿ ಹೇಳಿದರೂ ಕೇಳ!

ಬಿದಿಯಂ ಮೀಱುಗುಮೆ ಪೆಱರ ಪೇೞ್ದುಪದೇಶಂ! (೯೪)

ಈ। ತನಕಯ್ಯೊಳವಲ್ತುಪುರಾ। ತನ ಕರ್ಮಾಯತ್ತವಲ್ತೆ
ದೇಹಿಗಳೆಸಕಂ. (೯೬)

ಎಂದು ವಿದ್ಯಾದೇವತೆ ತಿಳಿದು, ಒಂದು ಕೂಗಿನಿಂದ ರಾಮನು ಲಕ್ಷ್ಮಣನ ಹತ್ತಿರ ಹೋಗುವಂತೆ ಮಾಡುವುದು. ರಾವಣನು ಸೀತೆಯನ್ನು ಹಿಡಿಯುವನು.

ದೋಷಿ ಪಿಡಿವಂತೆ ದಿವ್ಯದ
ಕಾಸಿದ ಕುಱುವಂ, ಕಡಂಗಿ ಕಾಳೋರಗನಂ
ಕೂಸು ಪಿಡಿವಂತೆ, ಪಿಡಿದಂ
ಸಾಸಿಗನವಿವೇಕಿ, ಸೀತೆಯಂ, ದಶಕಂಠಂ. (೧೦೧)

ರತ್ನಜಟಿ ಎಂಬ ಅರಸು ಆಕಾಶಕ್ಕೆ ಹಾರಿ ವಿಮಾನವನ್ನು ಅಡ್ಡಗಟ್ಟಲು, ಅವನ ತಂದೆಯಾದ

ಅರ್ಕಜಟಿಯು ಸಣ್ಪಿಂಗವನೊಳ್
ಕಾದದೆ ಕರುಣಿಸಿ ವಿದ್ಯಾ
ಚ್ಛೇದಂ ಗೆಯ್ದಂ ನಿರಂಕುಶಂ ದಶಕಂಠಂ. (೧೪೬)

ಲಂಕೆಗೆ ಹೋಗುತ್ತಾ, ತಡೆಯಲಾರದೆ,

ಕಣ್ಗಳ್ ಕೀಱಿ ಸರ್ವಾಂಗವಮಂ।
ತೆಗೆದಾಲಂಗಿಸೆ,....ಧೈರ್ಯಂಗೆಟ್ಟು ಮೇಲ್ವಾಯ್ದು ಚೇ।
ಷ್ಟೆಗೆ ಪೌಲಸ್ತ್ಯನುಪೊತ್ತುಗೊಟ್ಟ ನೆಸಲಾರಂ ದರ್ಪಕಂ
ದಂಡಿಸಂ? (೧೪೮)

"ಆಗಳವನಱಿಪಿಸಱಿಗೆಯ್ತುಕ್ಕೆ ಸೀತೆ ಸ್ಮರಿಸದೆ ನೀನೆನ್ನಂ ಸೋಂಕಿದೊಡೆ ನಾಲಗೆಗಿಱಿದ್ದು ಸಾವೆನೆಂದು ಪರಿಚ್ಛೇದಿಸಿ ನುಡಿಯೆ ದಶಾಸ್ಯನೋಸರಿಸಿ ಮಹಾಸತಿಯ ಶೀಲದಳವನಱಿಯುಸಪ್ಪುದಱಿಂ, ಅನಂತವೀರ್ಯಕೇವಲಿಗಳಿತ್ತ ಪರವಧೂವಿರತಿವ್ರತಪರಿಪಾಲನ ಮೆನಗರಿದಾದುದೆನೆ, ನಿಸರ್ಗರಾಗಿಗಳಪ್ಪ ಪೆಂಡಿರ ಪರಿಣಾಮಂ ಎಲ್ಲಿವರಂ ನಡೆಪಪ್ಪುದು? ಈಕೆಯು ನಾವತೆಱಿದೊಳವೊಡಂಬಡಿಸುವುದಾವ ಗಹನಂ! ಎಂದು ತನ್ನಂ ತಾನೆ ಸಂತಯಿಸುತ್ತುಂ"—
ಬಂದು ಲಂಕೆಯ ಉದ್ಯಾನಭವನದಲ್ಲಿ ಸೀತೆಯನ್ನಿಟ್ಟು, ಕಾಮತಾಪದಿಂದಲೂ, ಸೇಡು ತೀರಿಸದೆ ಓಡಿಬಂದ ಪರಾಕ್ರಮಹಾನಿಯ ಅವಮಾನದಿಂದಲೂ ಹಂಬಲಿಸುತ್ತಾನೆ. (೧೫೪). ಮಂಡೋದರಿಗೆ ಹೇಳಿಕೊಳ್ಳಲು ನಾಚುತ್ತಾನೆ. ಅವಳು ಊಹಿಸಿದಮೇಲೆ—

ಅಱಿಪುವ ವಾರ್ತೆಯಲ್ತು ನಿನಗೆನ್ನ ನೆಗಱ್ತೆಯವಾರ್ತೆ,
ನೀನೆಮಂ
ನ್ನಱಿದ ಬಱಿಕ್ಕದಂ ನಿನಗೆ ವಂಚಿಸಲಾಗದು, ತಂದೆನಿಂದುಮುಂ
ದಱಿಯದೆ ಸೀತೆಯಂ....(೧೬೦)

ಎಂದು ಹೇಳಿ ಇಷ್ಟಪ್ರಾಪ್ತಿಯಾಗದಿದ್ದರೆ "ಸಾವು ಸಮನಿಸುಗುಂ

ಎನೆ ದಶಾನನನದಶಾವಸ್ಥೆಯುಂ ಕಂಡು ಮಂಡೋದರಿ ಭಯಂ ಗೊಂಡು

ಅಚಿರ ಪ್ರಭೆಯುಂ ಪೆಂಡಿರ
ಶುಚಿತ್ವಮುಂ ಕ್ಷಣದಿನಗ್ಗಳಂ ನಿಲ್ಕುಮೆ....
ಆಕೆಯನೊಡಂಬಡಿಸಲಾಸೆ ಸಾಲ್ವೆಂ!'' (೧೬೧-೨)

ಎಂದು ಸಮಾಧಾನಪಡಿಸುವಳು. ಇಂತಹ ಹೆಂಡತಿಯಿಂದ ಕಣ್ಣು ತೆರೆಯುವುದೆ? ಹುಚ್ಚು ಬಿಡುವುದೆ?

ಮಂಡೋದರಿಯ ಮಾತಿಗೆ ಸೀತೆ 'ಮನದೊಳಕನಲ್ದು' ಹೇಳುತ್ತಾಳೆ—

ಇದು ಮತ್ತೋನ್ಮತ್ತಜಲ್ಪಂ, ಕುಲವಧುವರ ಮಾತಲ್ತು, ನಿಮ್ಮಂದಿಗರ್ ವಂ
ಶದ ಕೇಡಂ ನೋಡದೊಳ್ಪಂ ಬಗೆಯದೆ, ಪೞಿಗಂ ಪಾತಕಕ್ಕಂ ಭಯಂ ಗೊ
ಳ್ಳದೆ ಪೇೞಿರ್, ಪೊಲ್ಲ ಮಾತಂ ನುಡಿವಿರಿದು ಮನಂನೋಯ್ಪ ಸಂಕಲ್ಪಜಲ್ಪಂ,
ಮದಧೀಶಂ ರಾಮಚಂದ್ರಂ ಪೊಱಗೆನೆ ಪೆಱರೇ ಮಾತೊ ಜಾತಾನುಜಾತರ್. (೯. ೧೭೦)

ರಾವಣನು ಬಂದು ಚಕ್ರಾಧಿಪತ್ಯದ ಸೌಖ್ಯವನ್ನು ತೋರಿಸಿ, ರಾಮನನ್ನು ಜರೆದರೆ—

ಗುಣಹಾನಿಯಿಂದಧೋಗತಿ,
ಗುಣದಿಂ ಸ್ವರ್ಗಾಪವರ್ಗಸುಖಮುಕ್ಕುಮೆನಲ್
ಗುಣಹೀನನಸಿರಿಯಿಂದಂ
ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ! (೧೮೨)

ಎಂದು ಧಿಕ್ಕರಿಸುವಳು. ರಾವಣನಿಗೋ ಪ್ರೀತಿ ಹೆಚ್ಚಾಗುವುದು-

ಜಿಡೆನುಡಿಯೆ ಸೀತೆ, ಪುಳಿಸಿನ
ಪಡೆಮಾತಂತಿರ್ಕೆ' ರಾವಣಂಗೊಲವು ಪದಿ
ಮರ್ಗಡಿಸಿತ್ತಪ್ರಾಪ್ತಿ ರಸಂ
ಒಡೆಗುಂ ವೈಷಯಿಕಸುಖದೊಳಿದು ವಿಸ್ಮಯಮೇ! (೧೮೬)

ವಿಭೀಷಣನು ರಾತ್ರಿ ಸೀತೆ ಶೋಕಿಸುವ ಸ್ವರವನ್ನು ಕೇಳಿ "ನೈಮಿತ್ತಿಕಾದೇಶಮುಂ ನೆನೆದು" ರಾವಣನಿಗೆ ಬುದ್ಧಿ ಹೇಳುವನು ಸುಗ್ರೀವ ಹನುಮಂತರು ರಾಮನನ್ನು ಸೇರಿ, ಹನುಮಂತನನ್ನು ರಾಯಭಾರಿಯಾಗಿ ಕಳುಹಿಸುವರು. ಜಾಂಬೂನದನು ಹೇಳುತ್ತಾನೆ:

ನಯಮುಂ ತನಗಿರ್ಪಿದೊಡ
ನ್ನೆಯಮುಂ ಬಿಡದನ್ನರಿಲ್ಲ, ರಾಗಾದಿಗಳಿಂ
ನಿಯತಂಗಳೆ? ಕನ್ನಡಿಯುಂ
ಪ್ರಯತ್ನದಿಂ ಬೆಳಗೆ ಪತ್ತುವಿಡದೆ ಕಲುಂಬಂ? (೧೧. ೩೦)

ವಿಭೀಷಣನು "ಶುದ್ಧಾಚಾರಂ, ವಿಚಾರಪರಂ," ನಾವು ರಾವಣನ ನಂಟರು; ಮೊದಲು ಸಂಧಿಗೆ ಪ್ರಯತ್ನ ಪಡಬೇಕು. ಅದರಂತೆ ಹೋಗಿ ಹನುಮಂತನು ವಿಭೀಷಣನನ್ನು ಕುರಿತು—

"ಶೌಚದಗ್ಗಳಿಕೆಯುಂ.... ಕೊಂಡಾಡುವೀ ರಾವಣಂ–"
ಎಣಿಸದೆ ತನ್ನ ಶೌಚಗುಣಮುಂ ವ್ರತರಕ್ಷಣಮುಂ ಪರಾಂಗನಾ
ಪ್ರಣಯಮನಪ್ಪುಕೈಯೆ ಶರಣಾಗತರಕ್ಷಣದಕ್ಷನಪ್ಪ ದ
ಕ್ಷಿಣ ಭರತ ತ್ರಿಖಂಡ ಧರಣೀಪತಿ. ದಾನವ ಚಕ್ರವರ್ತಿ, ರಾ
ವಣನಿದನಾಗದೆನ್ನದೊಡೆ ನಿನ್ನ ನೆಗಳ್ತೆಗೆ ಬನ್ನಮಾಗದೇ
(೧೧.೭೭-೮)

ಎಂದು ಆಕ್ಷೇಪಿಸಲು, ವಿಭೀಷಣನು–

ಆಗದಿದೆಂದಾನಿದನಿನ್ನೆಪದುದಾಸೀನದಿಂ ಮುನ್ನಮೇನಿರ್ದನೆ?
ಎನ್ನಯ....ಪೇಳ್ದುದಂ ಕೇಳನೆ!.... ಅನ್ನತ್ಯಾಗದೊಳೆ ದೇವಿ

ಕುಲಮುಂ ವ್ರತಮುಂ। ತನ್ನುನ್ನತಿಯುಂ ಕಾದೊಡ । ವಿನ್ನುಂ
ವೈರಾಗ್ಯಮಾದುದಿಲ್ಲೆನ್ನಗ್ರಜನೊಳ್॥....ಮತ್ತ ಮಟ್ಟಟ್ಟಿಯ
ಟ್ಟುತಿರ್ದಪಂ....'' (೮೦-೮೨)

ಎಂದು ವ್ಯಥೆ ಪಡುವನು.

ಹನುಮನಿಗೂ ರಾವಣನಿಗೂ ಮಾತುನಡೆಯುವುದು. ರಾವಣನು ಕಿಡಿಕಿಡಿಯಾಗಿ--

ಮಸುಳೆ ನಿಜಾನ್ವಯಮಾಯು ಮಹಿಮೋನ್ನತಿ, ನಾಬ್ಬಿಡೆವೋಗೆ ಪಾಟಿಯುಂ
ಪಸುಗೆಯುಮೆನ್ನ ಮನ್ನಣೆಯನಿಂದಗಿಯೊಳ್ ಸಮುಕಕ್ಷ್ಯನಾಗೆ ರಕ್ಷಿಸಿದುದನೇನುಮುಂ ಬಗೆಗೆ ತಾರದೆ, ಲಜ್ಜೆಯನೊಕ್ಕು, ಬಿಟ್ಟು ಮಾನಸಿಕೆಯನಿಂತು ಭೂಚರರ್ಗೆ ಖೇಚರ ನೀಂ ಚರನಾಗಿ ಬರ್ಪುದೇ !

ಉಪಕೃತಿಯುಂ ನೆನೆಯದೆ ನೀ
ನಪಕೃತಿಯ ನೊಡರ್ಚಿದ್ಯೆ ದುರಾತ್ಮನೆ, ರಿಪುಭೂ
ವಿಪರೊಳೊಡಗೂಡಿದ್ಯೆ, ದ್ರೋ
ಹ, ಪೆಂಪುಗಿಡೆ ದಂಡಿಸಲ್ಕೆವೇೞ್ಕುದೆ ನಿನ್ನಂ (೧೩೬-೭)

ಹೆಚ್ಚು ಮಾತೇಕೆ ?– ವಿಭೀಷಣನೂ ಶತ್ರುಗಳನ್ನು ಸೇರಿದನು: ತನ್ನ ಬುದ್ಧಿವಾದವೆಲ್ಲಾ ವ್ಯರ್ಥವಾಗಿ, ರಾವಣನಿಂದ ತಿರಸ್ಕೃತನಾಗಿ, ತನ್ನ ಪುಣ್ಯಕರ್ಮಾನುಸಾರವಾಗಿ, (೧೨. ೫೨–೭೬).

ಬಗೆ ದೆಸೆಬಿದ್ದಂ ಪರಿವುದು,
ಒಗೆಯುಂ ಬಗೆದಂತೆ ಪರಿಯಲೀಯದೆ, ಪಿರಿಯುಂ
ತೆಗೆವುದು ಪಟಿಪೊರ್ದದ ಬ
ಟ್ಟೆಗೆ, ನಿಜದಿಂದಾರ ಬಗೆಗಳುಂ ನೇರಿದುವೇ ? (೫೪)

ಎಂದು ಅಣ್ಣನಿಗೆ ಸಹಾನುಭೂತಿಯಿಂದ ಬುದ್ಧಿಹೇಳಿ.

ಇನ್ನು ಕೊನೆಯ ದೃಶ್ಯ: ಈ ರುದ್ರನಾಟಕದಲ್ಲೆಲ್ಲಾ ಅತಿ ಹೃದಯದ್ರಾವಕವಾದ ಸನ್ನಿವೇಶ:- (೧೪. ೮೨-೧೦೬). ಹನುಮ

ನೊಬ್ಬ ದ್ರೋಹಿ, ವಿಭೀಷಣನೊಬ್ಬ ಅಂಜುಕುಳಿದ್ರೋಹಿ. ಎಲ್ಲರೂ ಹೋಗಲಿ. ಯುದ್ಧ! ಸೋಲದಮೇಲೆ ಸೋಲು, ಮಕ್ಕಳು, ತಮ್ಮ, ನೆಂಟರು ಯಾರೂ ಇಲ್ಲ. ಶಾಂತಿಜಿನೇಶ್ವರನ ದೇವಾಲಯದಲ್ಲಿ ಅರ್ಚನೆಮಾಡಿಸಿ, ಜಪಮಾಡಿ, ಉಪಸರ್ಗಗಳನ್ನು ಸಹಿಸಿ, ಬಹುರೂ ಪಿಣೀ ವಿದ್ಯೆಯನ್ನು ಸಾಧಿಸಿದರೆ ಆ ವಿದ್ಯೆ ಲಕ್ಷ್ಮಣ, ರಾಮ ಇಬ್ಬರು ಳಿದು ಉಳಿದವರನ್ನು ಉಳಿಯಲೀಯೆ! ಎನ್ನುವಳು. ಆಹ! ವಿಧಿಯೇ!

ಕಡೆಯಸಲ ರಾವಣನು ಸೀತೆಯನ್ನು ಒಪ್ಪಿಸುವುದಕ್ಕೆ ಬರು ವನು: ತಾನೇ ಪರಿಶುದ್ಧನಾಗಿ ಹಿಂದಿರುಗುವನು. ಈ ವೈರಾಗ್ಯ ಪ್ರಕ ರಣವನ್ನು ನಾಗಚಂದ್ರನ ದಿವ್ಯವಾಣಿಯಲ್ಲೇ ಕೊಡದಿದ್ದರೆ ಯಾರಿಗೂ ತೃಪ್ತಿಯಾಗದು. (೧೪. ೧೦೭-೧೧೯)

ಸಮಧಿಕರಾರ್ ಜಗತ್ತ್ರಯದೊಳಿನ್ನೆನಗೆನ್ನೊಳಿದಿರ್ಚುವನ್ನರಾರ್ ಸಮರದೊಳೆಂದು, ತನ್ನ ಭುಜದಂಡಮನೀಕ್ಷಿಸಿ, ಜಾನಕೀಮುಖಾ ಬ್ಜಮನವಲೋಕಿಸಲ್ ಕರಮೆ ಕಾತರನಾಗಿ, ವಿಯಚ್ಚರಾಧಿಪಂ ಪ್ರಮದವನಕ್ಕೆ ಬಂದನರಲಂಬುಗಳಿಲ್ಲದ ಕಾಮನೆಂಬಿನಂ.

ಅಂತು ಭೋಂಕನೆ ಬರ್ಪ ರಾವಣನ ಗಂಡಗಾಡಿಯಂ ಕೆಲ ದೊಳಿರ್ದ ಖಚರಕಾಂತೆಯರ್ ಸೀತಾದೇವಿಗೆ ತೋರ್ಪುದುಂ—

ರಾವಣನ ರೂಪು ಸೀತಾ
ದೇವಿಗೆ ತೃಣಕಲ್ಪಮಾಯ್ತು, ಪತಿಭಕ್ತಿಯೊಳಾ
ರೀ ವನಿತೆಯ ತೆಱದಿಂ ಸ
ದ್ಭಾವಮನೋಳ್ಕೊಂಡ ಪುಣ್ಯವತಿಯರ್ ಸತಿಯರ್!
ವಿನಂ ಕೇಳ್ದಪೆನೋ ರಘು
ಸೂನುವ ಲಕ್ಷ್ಮಣನ ಪೊಲ್ಲವಾರ್ತೆಯನಿನ್ನೆಂ
ದಾ ಸತಿನಾನನೆ ಬರ್ಪ ದ
ಶಾನನನಂ ಕಂಡು ತಾಳ್ದಿದಳ್ ತಲ್ಲಳಮಂ.

ಅಂತು ತಲ್ಲಳಿಸುತಿರ್ದ ಮಾನಿನಿಯುಸಿಯ್ಗೆ ವಂದು, ದಶಾನನ ನಿಂತೆಂದಂ– ಬಹುರೂಪಿಣೀವಿದ್ಯೆ ಸಾಧಿತಮಾದುದು. ಇನ್ನೆನಗೆ ಸಾಧ್ಯಮಪ್ಪ ಮಖಿುಮಕ್ಕಮಿಲ್ಲ. ನಿನ್ನ ನಚ್ಚಿನ ರಾಮನ ದೆಸೆಯಂ ಬಿಟ್ಟು, ಎನಗೊಡಂಬಟ್ಟು, ಸಾಮ್ರಾಜ್ಯಸುಖಮನನುಭವಿಸೆನೆ, ಸೀತೆ ವಿಹ್ವಲೀಭೂತ ಚಿತ್ತೆಯಾಗಿ—

ಕರುಣಿಸುವೊಡೆನಗೆ, ದಶಕಂ
ಧರ, ಧುರದೊಳ್ ರಘುತನೂಜನಾಯುಃಪ್ರಾಣಂ
ಬರೆಗಂ ಬಾರದಿರೆನುತುಂ,
ಧರಿತ್ರಿಯೊಳ್ ಮೆಯ್ಯನೊಕ್ಕು ಮೂರ್ಛೆಗೆ ಸಂದಳ್.
ಜಾನಕಿ ಮೂರ್ಛಿತೆಯಾಗೆ ದ
ಶಾನನನನುಕಂಪೆ ಪುಟ್ಟೆ, ಕರುಣಿಸಿ, ತನ್ನಂ
ತಾನೆ ಪಟಿದುಟಿದು ಕರ್ಮಾ
ಧೀನ ಸಮುತ್ಪನ್ನ ದುರಘ ದುಷ್ಪರಿಣತಿಯುಂ.
ಕದಡಿದ ಸಲಿಲಂ ತಿಳಿವಂ
ದದೆ, ತನ್ನಿಂ ತಾನೆ ತಿಳಿದ ದಶವದನಂಗಾ
ದುದು ವೈರಾಗ್ಯಂ ಸೀತೆಯೊ
ಳುದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ !
ಪತ್ತುವಿಡದಿರ್ದನೇ ರವಿ
ಪತ್ತಿದ ಸಂಧ್ಯಾನುರಾಗಮುಂ, ಮನದಟಿಪಿಂ
ದೆತ್ತಾನುಂ ಪೊಲ್ಲೆನಿಪುದ
ನುತ್ತಮನಾಚರಿಸಿ ಪತ್ತುವಿಡದಿರ್ದಪನೇ !

ಅಂತು ಮನದೊಳೊಗೆದ ಕಾರುಣ್ಯರಸಮೆ ಸೀತೆಯೊಳಾದನು ರಕ್ತತೆಯುಂ ಕರ್ಚಿಕಳೆವುದುಂ, ಸ್ವಭಾವ ಪರಿಣತಿಯೊಳ್ ನಿಂದು, ಸ್ವಕೀಯಾಪ್ತ ಪುರುಷ ಪರಿಷಜ್ಜನಕ್ಕಿಂತೆಂದಂ–

ಗುಣ ಪರಿಪಾಲನಾರ್ಥಮೆನಗಂ ಬಗೆದೋಱಿವಳಿಲ್ಲ, ದಿವ್ಯ ಭೂಷಣ ವಸನಾಂಗರಾಗಮುಮನೊಲ್ಲದೆ, ಖೇಚರರಾಜ್ಯಲಕ್ಷ್ಮಿಯುಂ ತೃಣಸಮಾನಾಗೆ ಭಾವಿಸಿದಳೀ ಸತಿಯುಂ ಮೊದಲಾಗೆ, ಪೌರುಷ ಪ್ರಣಯಿಯೆನಿಂತಪೇಕ್ಷಿಸುವೆನೇ ಗುಣ ಹಾನಿಯನೆನ್ನ ಪಾಪದಿಂ!

ಇವರಂ, ಪ್ರಾಣ ಪ್ರಿಯರಂ,
ನೆವವಿಲ್ಲದೆ, ಕರ್ಮವಶನೆ ನೆವಮೆನೆ, ಕಂದ
ರ್ಪವಿಮೋಹದಿಂದಗಲ್ಚಿದೆ
ನವಿವೇಕಿಯೆನೆನ್ನ ಕುಲದ ಪೆಂಪಱಿವಿನೆಗಂ!
ರಾಮನನಗಲ್ಚಿ ತಂದಾ
ನೀ ಮಾನಿನಿಗಿನಿತು ದುಃಖಮುಂ ಪುಟ್ಟಿಸಿದೆಂ
ಕಾಮವ್ಯಾಮೋಹದಿನಾ
ಶಾಮುಖಮುಂ ಪುದಿಯೆ ದುರ್ಯಶಃಪಟಹರವಂ.

ಎನಗೆ ವಿಭೀಷಣಂ ಹಿತಮನಾದರದಿಂದಮೆ ಪೇೞ್ದಿರೆ, ಕೇಳದಾ ತನನವಿನೀತನೆಂ, ಗಜಱಿ ಗರ್ಜಿಸಿ ಬಯ್ದು ಸುಜಾತನಂ ವಿನೀತನನಱಿಯಟ್ಟಿ, ದುರ್ವ್ಯಸನಿಯೆಂ, ಕಱಿದೆಂ, ವ್ಯಸನಾಭಿಭೂತನಾವನುಮನುರಾಗವೇಗದೆ ಹಿತಾಹಿತ ಚಿಂತೆಯನೇಕೆ ಮಾಡುಗುಂ! ಜನದಱಿವಂ, ಪರಾಭವದ ಪತ್ತುಗೆಯಂ, ದೊರೆವೆತ್ತ ತಮ್ಮ ಮಾನನಿಕೆಯ ಕೇಡನ್, ಉನ್ನತಿಯ ಬನ್ನಮನ್, ಅನ್ಯಭವಾನುಬದ್ಧಮಪ್ಪನುಗತಿಯಂ, ಸುಹೃಜ್ಜನದ ಬೇವಸಮಂ, ಜನತಾಪವಾದಮಂ ವ್ಯಸನಿಗಳಾರುಮೆತ್ತಲಱಿವರಾ ವಿಷಯಾಸವಮತ್ತಚೇತಸರ್?

ಎಂದುದ್ವೇಗಪರನಾಗಿ ನುಡಿದಾತ್ಮಗತದೊಳಿಂತೆಂದಂ–

ಇರದುಯ್ವೀಗಳೆ ಕೊಟ್ಟೊಡೆನ್ನ ಕಡುಪುಂ, ಕಟ್ಟಾಯಮುಂ, ಬೀರಮುಂ,
ಪಸುಡುಂ. ಬೀಸರಮುಕ್ಕುವೋಸರಿಸಿದಂತಾಗಿ ಕರ್ಮಮಂತಾಗದಂ

ತಿರೆ ದೋರ್ಗರ್ವಮನಿರ್ವರಲಂ ಪೊಗಟ್ಟಿಪ್ಪನಂ, ಸೌಮಿತ್ರಿಯುಂ ರಾಮ
ನಂ
ವಿರಥರ್ಮಾಡಿ ರಣಾಗ್ರದೊಳ್, ಪಿಡಿದು ತಂದಾಂ ಕೊಟ್ಟಪೆಂ
ಸೀತೆಯುಂ.
ಎಂದು ನಿಶ್ಚಯಿಸಿ ನಿಜನಿವಾಸಕ್ಕೆ ವಂದಂ.

ಇಂಥ ಬರವಣಿಗೆ ಕನ್ನಡಸಾಹಿತ್ಯದಲ್ಲಿ ಅಪೂರ್ವ. ಪದ, ಅರ್ಥ, ಭಾವ, ರಸ, ಮನುಷ್ಯ ಹೃದಯಜ್ಞಾನ, ಔದಾರ್ಯ, ಸೀತೆಯ, ರಾವಣನ ಉದಾತ್ತಚಿತ್ರ,—ಎಲ್ಲಕ್ಕೂ ಮೇಲೆ ಧರ್ಮದೃಷ್ಟಿ, ಒಂದುನುಡಿ ಬಿಡದ ಹಾಗೆ, ಒಂದುನುಡಿ ಸೇರಿಸದ ಹಾಗೆ ಕನ್ನಡದ ಸಂಸ್ಕೃತದ ಶಬ್ದವಿನ್ಯಾಸ, ಸರಳ, ಗಂಭೀರ, ನಾಟಕೀಯ ಶೈಲಿ, ವೃತ್ತ ಕಂದ ವಚನಗಳ ಸಮಕಟ್ಟು. ಎಲ್ಲಾ ಹದಿಮೂರೇ ಪದ್ಯ!

ರಾವಣನಿಗೆ ಉಳಿದಿರುವುದು ಇನ್ನು ಸಾವೊಂದು. ದುಶ್ಶಕುನಗಳನ್ನು ಕಂಡು ಬೆದರಿ ಮಂಡೋದರಿ "ನೀತಿ"ಯನ್ನೋದಲು—

ರೋಷಾವೇಶದಿಂ ರಾವಣಂ
ನೀನಿಲ್ಲಿಂ ತೊಲಗೆಂದು ಚಪ್ಪರಿಸಿದಂ ಮಂಡೋದರೀದೇವಿಯುಂ!
(೧೪. ೧೨೩)

ರಣರಂಗದಲ್ಲಿ ಲಕ್ಷ್ಮಣನ ಚಕ್ರ ವಿಧಿನಿಯಮಿತಕಾರ್ಯವನ್ನು ಪೂರೈಸಿತು—"ಕೈಲಾಸಮಂ ತೂಗಿದ ಗಂಡ"ನನ್ನು "ಕೋಟಿಕಶಿಲೆಯ ನೆತ್ತಿದ ಮಹಾಸತ್ವಂ ಸುದರ್ಶನ ಚಕ್ರದಿಂದಿಡುವುದುಂ"—

ಹೃದಯಂ ಸೀತಾನಿಮಿತ್ತಂ ಮನಸಿಜನಿಸೆ ಪಂಚೇಷುವಿಂ ಭಿನ್ನ
ಮಾಗಿ
ದುರ್ದದಟ್ಟಿಂ, ಲಕ್ಷ್ಮೀಧರಂ ಕೋಪದಿನಿಡೆ ಪೆಟ್ಟಿತೇಂ ಚಕ್ರರತ್ನಕ್ಕೆ
ಪಾಡಾ

ಮುನ್ನುಡಿ

ಮುದೆಸಲ್, ಸಟ್ಟುರ್ಚಿ ಬೆನ್ನಿಂ ಪೊಱಮಡೆ, ವಿಗತಪ್ರಾಣನಾ
ದಾನವೇಂದ್ರಂ,
ತ್ರಿದಶೇಂದ್ರಂ ವಜ್ರದಿಂದಿಟ್ಟೊಡೆ ಸಡಗೆ ನೆಲಂ ಪೇಳ್ವಿಂತೆ,
ಪಿಳ್ದಿಂ. (೧೮೯)

ಶಾಂತಮಸ್ತು !

ಜಯ, ಜಿತವೃಜಿನ, ಜಿನೇಶ್ವರ,
ದಯಾನದೀ ಪುಳಿನ ರಾಜಹಂಸ, ಭವಾಂಭೋ
ಧಿಯ ತಡಿಯನೆಯ್ದಿಸೆಮ್ಮಂ
ನಯನಿಕ್ಷೇಪಪ್ರಮಾಣ ಪಾತ್ರದಿನರ್ಹಾ !

ನೇವಾಳವೆಂದು ಕೆಲಬರ್
ಪಾವಂ ಪಿಡಿವಂತೆ, ದೇವ, ನೀನಲ್ಲದರಂ
ದೇವರಿವರೆಂದು ಪಿಡಿದಿ
ನ್ನೇವಿಧಿವಟ್ಟಪರೊ ಮೋಹಮೂರ್ಛೆಯಿನರ್ಹಾ !

ನಿನಗೆ ರಸಮೊಂದೆ ಶಾಂತಮೆ,
ಜಿನೇಂದ್ರ, ಮನಮಾ ರಸಾಂಬುನಿಧಿಯೊಳಗವಗಾ
ಹನಮಿರ್ದುದು, ಮಿಕ್ಕ ರಸಮುಂ
ಕನಸಿನೊಳಂ ನೆಸೆಯದಂತು ಮಾಡೆಮಗರ್ಹಾ

(ರಾಮ. ೭. ೪೦–೨)

—ಶ್ರೀ.

# ಒಪ್ಪೋಲೆ

| | ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| **ನಾ. ಕಾ.** | ೧ | ೫ | ಸರಿಕತನ | ಪರಿಕತನ |
| | ೮ | ,, | ಬಲಿಸ್ಸಂಘು | ಸಂಘು |
| | ೧೫ | Footnote | Ar. | Archaeological |
| | ೩೪ | ೧೦ | ನಾಗಚಂದ್ರುಸು | ನಾಗಚಂದ್ರನ |
| **ಮ. ಸ್ಥಾ.** | ೨೨ | ೯ | ಸ್ತ್ರರಿಂದಿದ | ಸ್ತ್ರರದಿಂದಿ |
| | ೨೪ | ೫ | ಮಾತೃಕೆಯಿಂ | ಮಾತೃಕೆಯುಂ |
| | ೩೬ | ೧೮ | ಆತನು | ಅತನು |
| | ೪೪ | ೨೦ | ಆಡಕ್ಕೆ | ಅದಕ್ಕೆ |
| | ೪೫ | ೧೮ | ಬ್ರುಹಚರ್ಯಂ | ಬ್ರಹ್ಮಚರ್ಯಂ |
| | ೪೯ | ೧೮ | ಕಮೋತ್ಸವು | ಕರ್ಮೋತ್ಸವವು |
| | ೫೦ | ೪ | ಲಕ್ಷ್ಮಮಿಂದೆಂ। | ಮಿಂದೆಂಬಂ। |
| | ೫೪ | ೨೪ | ಗೌರಿನಾಥ | ಗೌರೀನಾಥ |
| | ೫೭ | ೧ | ಭೇರಿರವ | ಭೇರೀರವ |
| | ,, | ೨ | ಕಂಠೀರವ | ಕಂಠೀರವರವ |
| | ೫೯ | ೧೦ | ದುರ್ದಶೆ | ದುರ್ದಶೆ |
| **ಪಂ. ಜೈ.** | ೪ | ೧೯ | ಲೋಕಕ್ಕ | ಲೋಕಕ್ಕೆ |
| | ೭ | ೪ | ವಿಷಯಾಸಂಗ | ವಿಷಯಸಂಗ |
| | ೧೪ | ೧೧ | ಜಿನಿಯಿಪುದು | ಜನಿಯಿಪುದು |
| | ೨೧ | ೨ | ಪಸುಮುರ | ಹಸುವರ |

# ಒಪ್ಪೋಲೆ

| | ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| | ೩೦ | ೧ | ಸೇವೆಯಂದೆ | ಸೇವೆಯೆಂದೆ |
| | ,, | ೨೪ | ಪರಿಶುದ | ಪರಿಶುದ್ಧ |
| **ನಾ. ವ.** | ೨ | ೨ | ರೂಪದಿಂದರಬಹುದು | —ದಿರಬಹುದು |
| | ೫ | ೨ | ಪಾಲಿರೆಯು | ಪಾಲಿರೀಯು |
| | ,, | ,, | ಮಂಜಿ | ಮುಂಜಿ |
| | ೧೩ | ೧೦ | ಏವಮಿಂ | ಏವಮೀಂ |
| **ಅಭಿ. ಶೈ.** | ೭ | ೧೭ | ಜಗತ್ಸುತ | ಜಗತ್ಸ್ತುತ |
| | ೧೨ | ೧,೪ | ಪುಣ್ಯಶಾಲಿಯಲ್ಲಿ | ಪುಣ್ಯಶಾಲಿ ಯನ್ನು |

———



# ಅಭಿನವ ಪಂಪ

ಎಂಬ

# ನಾಗಚಂದ್ರನ ಕಾಲನಿರ್ಣಯ

(ಮಂಜೇಶ್ವರ ಗೋವಿಂದ ಪೈ)

I ಅಭಿನವಪಂಪನೆಂಬ ನಾಗಚಂದ್ರನು ತನ್ನ ಮಲ್ಲಿನಾಥ ಪುರಾಣದಲ್ಲಿ (I. ೩೫) ರನ್ನನ 'ಅಜಿತಪುರಾಣ'ವನ್ನು 'ಕೃತಿರತ್ನ ಮೆನಿಸಿದಜಿತಪುರಾಣಂ' ಎಂದಿರುವನಷ್ಟೇ. 'ಅತಿಪರಿಚಯಾದವಜ್ಞಾ' ಎಂಬುದು ಮನುಷ್ಯಸ್ವಭಾವವೆಂದಾದರೆ, ಸಾಧಾರಣ ಪರಿಚಯವಾದರೂ ಪರಸ್ಪರ ಸರಿಕತನಕ್ಕಲ್ಲದೆ ಉದಾತ್ತವಾದ ಮನ್ನಣೆಗೆ ಎಡೆಗೊಡುವುದು ವಿರಳವೆಂಬುದೂ ಅಷ್ಟೇ ಸ್ವಭಾವೋಚಿತವೆನಿಸುವುದರಿಂದ, ಅಜಿತಪುರಾಣವನ್ನು ಕೃತಿರತ್ನವೆಂದ ನಾಗಚಂದ್ರನು ರನ್ನನನ್ನು ಕಂಡು ಬಲ್ಲವನಾಗಿರಲಾರನೆಂದು ಮಾತ್ರವಲ್ಲ, ಆತನಿಗಿಂತ ಸಾಕಷ್ಟು ಈಚೆಯವನಾಗಿರಬೇಕೆಂದೂ ಕಂಡಿತವಾಗಿ ಹೇಳಬಹುದು. ರನ್ನನು ಅಜಿತಪುರಾಣವನ್ನು ರಚಿಸಿದುದು ಶಾ. ಶ. ೯೧೫ನೆಯ ವಿಜಯ ಸಂವತ್ಸರದಲ್ಲಿ ಅಂದರೆ ಕ್ರಿ. ಶ. 993ರಲ್ಲಿ. ಅದರ ಬಳಿಕ ತಾನೆ ಗದಾಯುದ್ಧವನ್ನು ರಚಿಸಿದ ರನ್ನನು ಕ್ರಿ. ಶ. 1000ದ ವರೆಗಾದರೂ ಇದ್ದಿರಬೇಕೆಂಬುದರಿಂದ, ನಾಗಚಂದ್ರನು ಕ್ರಿ. ಶ. 1050ರಿಂದ ಈಚೆಯವನಾಗಿರಬೇಕು.

II ಕರ್ಣಪಾರ್ಯನು (ಅನುಬಂಧ I) ತನ್ನ ನೇಮಿನಾಥ ಪುರಾಣದಲ್ಲಿ ನಾಗಚಂದ್ರನನ್ನು 'ಅದ್ಯತನನಾಗಿಯುಂ ನೆಗೞ್ದಿರ್ದಾಪ್ತರ ದೊರೆಯೆನಿಸಿ'ದವನೆಂದು[೧] ಹೊಗಳಿರುವನಷ್ಟೇ. ಆ ಕರ್ಣಪಾರ್ಯನಿಂದ ನೇಮಿನಾಥಪುರಾಣವನ್ನು ಹೇಳಿಸಿದಾತನು[೨] 'ಜೀಮೂತವಾಹನ ವಿದ್ಯಾಧರ ಚಕ್ರಿ ವಂಶ ತಿಳಕ'ನೂ 'ಕಿಳಿಕಿಳ ಪ್ರಖ್ಯಾತ ದುರ್ಗಾಧಿಪ'ನೂ ಆಗಿದ್ದ ಗಂಡರಾದಿತ್ಯನೆಂಬ (ಪದ್ಯ ೨೨) ಅರಸನ ಮಗನಾದ ವಿಜಯಾದಿತ್ಯನೆಂಬ (೨೩) ಅರಸನ ಕರಣಾಗ್ರಣಿಯೂ (೨೫; ೨೩೬) ಮಂತ್ರಿಯೂ (೨೭; ೨೩೫) ಆಗಿದ್ದ ಲಕ್ಷ್ಮ (೨೬; ೨೭; ೨೩೫; ೨೩೬) ಅಥವಾ ಲಕ್ಷ್ಮಣ (೨೫; ೨೮; ೩೭) ಅಥವಾ ಲಕ್ಷ್ಮೀಧರ (೨೯; ೨೩೮) ಎಂಬವನೆಂದು ಆ ಕಾವ್ಯದಿಂದ ತಿಳಿಯುವುದರಿಂದ, ಕರಹಾಡದ ಶಿಲಾಹಾರವಂಶದ ಅರಸಾದ ಆ ವಿಜಯಾದಿತ್ಯನು ಆಳುತ್ತಿದ್ದ[೩] ಕ್ರಿ. ಶ. 1143 ರಿಂದ 1174 ರೊಳಗಣ ಯಾವೊಂದು ವರ್ಷದಲ್ಲಿ ಆ ಕಾವ್ಯವು ಬರೆದು ಮುಗಿದಿರಬೇಕು. ಅದು ಕ್ರಿ. ಶ. 1170 ರಲ್ಲಿ ರಚಿತವಾಯಿತೆಂದು ಇಟ್ಟುಕೊಂಡರೆ, ಆ ಕರ್ಣಪಾರ್ಯನು ಅದ್ಯತನನೆಂದ ನಾಗಚಂದ್ರನು ಕ್ರಿ. ಶ. 1140-50 ರಲ್ಲಿ ಇದ್ದಿರಬೇಕು, ಅಥವಾ ಸತ್ತಿರಬೇಕಷ್ಟೇ ಎಂದು ನಿಶ್ಚಯಿಸಬಹುದು.

ಆತ ಏವ ನಾಗಚಂದ್ರನ ಕಾಲನಿರ್ಣಯದಲ್ಲಿ ಕ್ರಿ. ಶ. 1050ನ್ನು ವರಿಷ್ಠಾವಧಿಯಾಗಿಯೂ ಕ್ರಿ. ಶ. 1150ನ್ನು ಕನಿಷ್ಠಾವಧಿಯಾಗಿಯೂ ಇಟ್ಟುಕೊಳ್ಳಬಹುದು.

III 'ಜಯಕರ್ಣಾಟಕ'ದ VIIIನೆಯ ಸಂಪುಟದ ೨-೩ ನೆಯ ಸಂಚಿಕೆಗಳಲ್ಲಿ ಪ್ರಕಟವಾದ ಬಿಜಾಪುರದ ಶಿಲಾಲೇಖದ[೪]

---

೧ ಕರ್ಣಾಟಕ ಕವಿ ಚರಿತ್ರೆ I (ಪು. 101). ೨ 'ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ' (ಪು. 79-81). ೩ ಡಿ (ಪು. 84-85). ೪ ಈ ಶಿಲಾಲೇಖದ ೧೧ ನೆಯ ಪದ್ಯದಲ್ಲಿ ವರ್ಗಪ್ರಾಸವಿದೆ; ಇದು ಛಂದಃಸೂತ್ರಗಳಿಗೆ ಸರಿಯೇ

೨ನೆಯ ಪದ್ಯದ ೩-೪ನೆಯ ಚರಣಗಳು ಪಂಪರಾಮಾಯಣ VI. ೮೪ನೆಯ ಚರಣಗಳಾಗಿವೆ; ಆ ಶಿಲಾಲೇಖದ ೨೦ನೆಯ ಪದ್ಯವು ಒಂದೇ ಮಾತಿನಷ್ಟು ವ್ಯತ್ಯಾಸದಿಂದ ಪಂಪರಾಮಾಯಣದ I. ೪೫ನೆಯ ಕಂದಪದ್ಯವಾಗಿದೆ.

ಈ ಶಿಲಾಲೇಖವು ಚಾಳುಕ್ಯಚಕ್ರೇಶ್ವರನಾದ ತ್ರಿಭುವನಮಲ್ಲ ವಿಕ್ರಮಾದಿತ್ಯನ ಆಳಿಕೆಯಲ್ಲಿ (ಕ್ರಿ. ಶ.1076-1126)ಆತನ ಮಗನಾದ ಯುವರಾಜ ಮಲ್ಲಿಕಾರ್ಜುನನ ಆಡಳಿತೆಯಲ್ಲಿ ಉಳ್ಳ ಬಿಜಾಪುರದಲ್ಲಿ ಹುಟ್ಟಿತೆಂದು ತಿಳಿಯುತ್ತದೆ. (ಅದರ ಹಿಮ್ಮಗ್ಗಲಿನಲ್ಲಿರುವ ಭುವನೈಕಮಲ್ಲನ ಕಾಲದ ಲೇಖದಲ್ಲಿ 'ರಾಜಧಾನಿ ವಿಜಯಾಪುರ' ಎಂದಿದೆ). ಯುವರಾಜನೆಂಬುದು ಮುಂದೆ ಪಟ್ಟಕ್ಕೆ ಬರುವಾತನೆಂಬ ಅರ್ಥದಿಂದ ಆಳರಸನ ಹಿರಿಯ ಮಗನಿಗೇ ವಿನಾ ಆತನ ಇತರ ಮಕ್ಕಳಿಗಲ್ಲವೆಂಬುದನ್ನು ನೆನವಿನಲ್ಲಿ ಇಟ್ಟುಕೊಂಡು, ತ್ರಿಭುವನಮಲ್ಲ ವಿಕ್ರಮಾದಿತ್ಯನ ಮಗನಾದ ಜಯಕರ್ಣನು[೫] ತನ್ನ ಕ್ರಿ. ಶ. 1120ರ ಸಿಂದಗಿಯ ಶಾಸನದಲ್ಲಿ ತನ್ನನ್ನು ಮಹಾಮಂಡಲೇಶ್ವರನೆಂದೇ ಹೇಳಿಕೊಂಡಿರುವನಲ್ಲದೆ ಯುವರಾಜನೆಂದು ಹೇಳಿಕೊಂಡಿಲ್ಲವೆಂಬುದನ್ನೂ, ಆ ವಿಕ್ರ

---

ಆದರೂ ತೀರ ವಿರಳವಾಗಿದೆ. ಇದರ ೨೪ ನೆಯ ಪದ್ಯದಲ್ಲಿ **ಹ**-ಕಾರಕ್ಕೆ ಪ್ರಾಸಾಕ್ಷರವಾಗಿ **ಯ**-ಕಾರವು ಉಪಯೋಗಿಸಲ್ಪಟ್ಟಿದೆ; ಇಂಥಾ ಪ್ರಯೋಗಕ್ಕೆ ಛಂದಃಸೂತ್ರಗಳಲ್ಲಿ ಆಧಾರವೂ ಇಲ್ಲ, ಹಳೆಯ ಸಾಹಿತ್ಯದಲ್ಲಿ ಉದಾಹರಣವೂ ಇಲ್ಲ. ರನ್ನನ ಅಜಿತ ಪುರಾಣದಲ್ಲಿ (V. ೬೦) **'ರ-ಲ-ಳ'** ಗಳು ಪ್ರಾಸಾಕ್ಷರಗಳಾಗಿರುವ ಚಂಪಕಮಾಲೆ ಇದೆ. ಮಲ್ಲಿನಾಥ ಪುರಾಣದಲ್ಲಿ **'ವ-ಮ'** ಕಾರಗಳು ಪ್ರಾಸಾಕ್ಷರಗಳಾಗಿವೆ (VIII. ೧೩; XIV. ೫೫); ಆದರೆ ಈ ಪ್ರಯೋಗವು ಕವಿರಾಜಮಾರ್ಗದಲ್ಲಿಯೂ (III. ೧೬೯) ಪಂಪ ಭಾರತದಲ್ಲಿಯೂ (XIV. ೪೮), ಅರ್ಧನೇಮಿ ಪುರಾಣದಲ್ಲಿಯೂ (III. ೯೧; V. ೭೪) ಇದೆ. ಈ ಶಿಲಾಲೇಖದ ಹಿಮ್ಮಗ್ಗಲಲ್ಲಿರುವ ಭುವನೈಕಮಲ್ಲನ ಕುಲದ ಶಾಸನದ ತೇದಿ ಕ್ರಿ. ಶ. 1074 ನೆಯ ದಿಸಂಬರ ೨೫ ನೆಯ ತಾರೀಖು ಗುರುವಾರವಾಗುತ್ತದೆ. ೫ Fleet's 'Kanarese Dynasties'

ಮಾದಿತ್ಯನ ಇನ್ನೊಬ್ಬ ಮಗನಾದ (ಮತ್ತು ಆತನ ಕಾಲಾನಂತರ ಪಟ್ಟಕ್ಕೆ ಬಂದು ಅರಸಾದ) ಭೂಲೋಕಮಲ್ಲ ಪೆರ್ಮಾಡಿ ಸೋಮೇಶ್ವರನು ತನ್ನ ಚಾಳುಕ್ಯ ವಿಕ್ರಮವರ್ಷ (ಚಾ. ವಿ.) ೭ನೆಯ ದುಂದುಭಿ ಸಂ। ಫಾಲ್ಗುಣ ಬಹುಳ ೫ ಸೋಮವಾರದ (**ಬುಧ**ವಾರ ೨೮ನೆಯ ಫೆಬ್ರವರಿ 1084) ಸವದಿಯ ಶಾಸನದಲ್ಲಿ[೧] ತನ್ನನ್ನು ಮಹಾಮಂಡಳೇಶ್ವರ ಭೂಲೋಕಮಲ್ಲ ಪೆರ್ಮಾಡಿ ಎಂದೂ, ತನ್ನ ಚಾ. ವಿ. ೪೫ನೆಯ ಶಾರ್ವರಿ ಸಂ। ಕಾರ್ತಿಕ ಶುಕ್ಲ ೧ ರವಿವಾರದ (24ನೆಯ ಅಕ್ಟೋಬರ 1120) ಜಕ್ಕಲಿಯ ಶಾಸನದಲ್ಲಿ[೨] ತನ್ನನ್ನು ಕುಮಾರ ಸೋವಿದೇವರಸನೆಂದೂ ಹೇಳಿಕೊಂಡಿರುವನೇ ವಿನಾ ಯುವರಾಜನೆಂದಿಲ್ಲವೆಂಬುದನ್ನೂ ಮನವರಿಸಿದರೆ, ವಿಕ್ರಮಾದಿತ್ಯನಿಗೆ ಇವರಿಬ್ಬರಿಗಿಂತ ಹಿರಿಯುವನಾದ, ಆತ ಏವ ಯುವರಾಜನಾಗಿದ್ದ, ಬೇರೊಬ್ಬ ಮಗನಿದ್ದನೆಂದು ದೃಢವಾಗುತ್ತದೆ. 'ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವ'ನ ಆಳಿಕೆಯ ಕಾಲದ ಚಾ. ವಿ. ೩೫ನೆಯ ವಿಕೃತಿ ಸಂ। ಕಾರ್ತಿಕ ಹುಣ್ಣಿಮೆ ವಡ್ಡವಾರದಂದಿನ (1110ನೆಯ ಅಕ್ಟೋಬರ 29 ಶನಿವಾರ) ಮುತ್ತಗಿಯ ಶಾಸನದಲ್ಲಿ[೩] ಹೇಳಲ್ಪಟ್ಟಿರುವ 'ಚಾಳುಕ್ಯ ಚಕ್ರವರ್ತಿಯ ಮಗಂ ಯುವರಾಜ ಮಲ್ಲಿಕಾರ್ಜುನದೇವ'ನೆಂಬವನು ಆತನೇ ಆಗಿರಬೇಕು. ಈ ಮಲ್ಲಿಕಾರ್ಜುನದೇವನು ಚಾ. ವಿ. ೨ನೆಯ ಪಿಂಗಳಸಂವತ್ಸರದಲ್ಲಿ (1077-78) ಹಾನುಂಗಲ್ಲಲ್ಲಿ ಆಳುತ್ತಿದ್ದನೆಂದು ಸೊರಬದ ನಂ. 172ನೆಯ[೪] ಒಂದು ವೀರಕಲ್ಲಿನಲ್ಲಿದೆ. ಆದರೆ ಲಕ್ಷ್ಮೇ

---

(ಪು. 455). ೧ Annual Report on South Indian Epigraphy (A. R. S. I, E.) 1928 (App F. ನಂ. 2; ಪು. 20). ಅದರಲ್ಲಿ ಸೋಮವಾರವೆಂದಿರುವುದು ಸರಿಯಲ್ಲ: **ಸೌಮ್ಯ**ವಾರವೆಂದಾಗಬೇಕು. ಸೌಮ್ಯವಾರವೆಂದರೆ ಬುಧವಾರ. ೨ Ibid: Supplement 1927. Bombay Karnatak (App. F. ನಂ. 196; ಪು. 15). ೩ Epigraphia Indica (E. I.). XV. ಪು. 29. ೪ Epigraphia Carnatica (E. C.) VIII.

ಶ್ವರದೊಂದು ಶಾಸನದಲ್ಲಿ[೧೦] ಚಾ. ವಿ. ೩೨ನೆಯ ಸರ್ವಜಿತ್ಸಂವತ್ಸರ ದಲ್ಲಿ (ಕ್ರಿ. ಶ. 1107) ಹಾನುಂಗಲ್ಲಲ್ಲಿ ಮಹಾಮಂಡಲೇಶ್ವರ ತ್ರೈಲಹ ದೇವನು ಆಳುತ್ತಿದ್ದನೆಂದು ಹೇಳಿರುವುದರಿಂದ, ಅದಕ್ಕೆ ಮುಂಚೆಯೇ ಯುವರಾಜ ಮಲ್ಲಿಕಾರ್ಜುನನು ಹಾನುಂಗಲ್ಲನ್ನು ಬಿಟ್ಟು ಬೇರೊಂದು ಮಂಡಲದ ಆಧಿಪತ್ಯದಲ್ಲಿ ನೇಮಿಸಲ್ಪಟ್ಟಿರಬೇಕು. ಆತನ ಮಗಳ ಗಂಡನಾದ ಮಹಾಮಂಡಲೇಶ್ವರ ವಿಕ್ರಮಾದಿತ್ಯನೆಂಬವನು 'ಮುತ್ತ್ರ್ಗೆ ಮೂವತ್ತುಮಂ' ಆಳುತ್ತಿದ್ದನೆಂದು ಆ ಕ್ರಿ. ಶ. 1110ರ ಮುತ್ತಗಿಯ ಶಾಸನದಿಂದ ತಿಳಿಯುವುದರಿಂದ, ಆ ಮುತ್ತ್ರ್ಗೆ ಮೂವತ್ತು ಆಗ್ಗೆ ಮಲ್ಲಿಕಾರ್ಜುನನ ಹಿಡುವಳಿಯಲ್ಲಿ ಉಳ್ಳ ಮಂಡಲ ದಲ್ಲಿ ಸೇರಿರಬಹುದು, ಅಂದರೆ ಮಲ್ಲಿಕಾರ್ಜುನನು ಆಗ್ಗೆ ಬಿಜಾಪುರದ ಮಂಡಲಾಧಿಪತ್ಯದಲ್ಲಿ ಇದ್ದಿರಬಹುದು. ಈತನು ಯುವರಾಜನೆಂಬು ದರಿಂದ ವಿಕ್ರಮಾದಿತ್ಯನ ಹಿರೇಮಗನಾಗಿದ್ದರೂ, ಆತನ ಬಳಿಕ ಅರ ಸಾಗಲಿಲ್ಲವೆಂಬುದರಿಂದ, ಈತನು ತನ್ನ ತಂದೆಯ ಮುಂಚೆಯೇ ಮೃತ ವಾಗಿರಬೇಕು.[೧೧] ಈ ಕಾರಣಗಳಿಂದ ಯುವರಾಜ ಮಲ್ಲಿಕಾರ್ಜು ನನು ಕ್ರಿ. ಶ. 1105ರಿಂದ 1120 (1125?) ರ ವರೆಗೆ ಬಿಜಾಪುರದ ಮಂಡಲಾಧಿಪತ್ಯದಲ್ಲಿ ಇದ್ದಿರಬಹುದು; ಹಾಗಾದರೆ ಈ ಶಿಲಾಲೇಖವು ಕ್ರಿ. ಶ. 1110- ರಿಂದ 1120 ರೊಳಗೆ ಹುಟ್ಟಿರಬಹುದು.

---

೧೦ E. I. XVI ಪು. 39. ೧೧ 'ಜಯಕರ್ಣಾಟಕ' (VIII ೨.ಪು. ೮೪) ದಲ್ಲಿ ಉದಾಹರಿಸಿರುವ ಸೊರಬನಂ. 440 ಯ (E. C. VIII) ಶಾಸನದಿಂದ ನೇರಾದ ಆಧಾರ ದೊರೆಯದು. ಏಕೆಂದರೆ (೧) ಅದರಲ್ಲಿ ಹೇಳಿರುವ ೪೨ ನೆಯ ವರ್ಷವು ಯಾವ ಶಕದ ಅಥವಾ ಯಾರ ಆಳಿಕೆಯದೆಂದು ತಿಳಿಯದು; (೨) ಅದು ಚಾ. ವಿ. ೪೨ ಎಂದಾದರೆ ವಿಳಂಬಿ ಸಂವತ್ಸರವಾಗಬೇಕಲ್ಲದೆ ಕೀ (ಲಕ) ವಾಗದು; (೩) ಕೀಲಕ ಸಂವತ್ಸರವು ಚಾ. ವಿ. ೫೨ ಎಂಬುದರಿಂದ, ತನ್ನ ತಂದೆಯಾದ ವಿಕ್ರ ಮಾದಿತ್ಯನು ಕಾಲವಾದ ಚಾ. ವಿ. ೫೦ ಕ್ಕೆ ಬಹುಶಃ ಮುಂಚೆಯೇ ಕಾಲವಾಗಿರಬೇ ಕಾದ ಯುವರಾಜ ಮಲ್ಲಿಕಾರ್ಜುನನು ಚಾ. ವಿ. ೫೨ ರಲ್ಲಿ ತನ್ನ ತಮ್ಮನಾದ III

ಈ ಶಿಲಾಲೇಖದ ೨ ಪದ್ಯಗಳು ಪಂಪರಾಮಾಯಣದಲ್ಲಿಯೂ ಇವೆ, ಅಥವಾ ಪಂಪರಾಮಾಯಣದ ೨ ಪದ್ಯಗಳು ಈ ಶಿಲಾಲೇಖದಲ್ಲಿಯೂ ಇವೆ ಎಂಬುದರಿಂದ ಈ ಬಗೆಯ ಅನುಮಾನಗಳು ಸಹಜವಾಗಿ ಉಂಟಾಗುತ್ತವೆ—

(೧) ನಾಗಚಂದ್ರನಿಗಿಂತ ಹಿಂದಣಿಂದಲೇ ಈ ಶಿಲಾಲೇಖವಿದ್ದು, ಅದರಿಂದ ಆವೆರಡು ಪದ್ಯಗಳನ್ನು ಆತನು ತನ್ನ ಪಂಪರಾಮಾಯಣದಲ್ಲಿ ಇಸುಕೊಂಡಿರಬಹುದು. ಆದರೆ ಮಹಾಕವಿಯಾದ ನಾಗಚಂದ್ರನು ಹಾಗೆ ಮಾಡಲೊಲ್ಲನೆಂದು ತೋರುವುದರಿಂದ ಅನುಮಾನವನ್ನು ನೀಗಿಬಿಡಬಹುದು.

(೨) ಈ ಶಿಲಾಲೇಖವು ಹುಟ್ಟುವ ಮುಂಚೆಯೇ ಪಂಪರಾಮಾಯಣವು ಪ್ರಕಟವಾಗಿದ್ದು, ಆದರಿಂದ ಈ ಪದ್ಯಗಳನ್ನು ಈ ಶಿಲಾಲೇಖದ ಯಾವೊಬ್ಬ ರಚಕನು ತನ್ನ ಕೃತಿಯಲ್ಲಿ ಎತ್ತಿಕೊಂಡಿರಬಹುದು.[೧೨] ಹಾಗಾದರೆ ಈ ಲೇಖರಚಕನು ಪಂಪ–ಪೊನ್ನ–ರನ್ನರ ಕೃತಿಗಳಿಂದ ಎತ್ತಿಕೊಳ್ಳದೆ ಪಂಪರಾಮಾಯಣದಿಂದ ಇಸುಕೊಂಡುದರಿಂದ, ಈ ಲೇಖದ ಕಾಲದಲ್ಲಿ ಅದೊಂದು ಮಹಾಕಾವ್ಯವೆಂದು ಖ್ಯಾತಿಪಡೆದಿರಬೇಕೆಂದು ಮಾತ್ರವಲ್ಲ, ಅವರ ಪದ್ಯಗಳು ಕವಿಗಳ ಸಾಹಿತಿಗಳ ನೆನಪಿನಲ್ಲಿ ಇನ್ನೂ ಹಸಿರಾಗಿದ್ದುದರಿಂದ ತಾನೆ ಈ ರಚ

---

ನೋಮೇಶ್ವರನ ಆಳಿಕೆಯ ೪ ನೆಯ ವರ್ಷವಾದ ಚಾ. ವಿ. ೫೨ ನೆಯ ಕೀಲಕ ಸಂ. ದಲ್ಲಿ ಇನ್ನೂ ಬದುಕಿರಲಿಕ್ಕೆ ಕಾರಣವಿಲ್ಲ. ಅಥವಾ ಮಲ್ಲಿಕಾರ್ಜುನನು ಚಾ. ವಿ. ೫೨ ರಲ್ಲಿ ಇನ್ನೂ ಇದ್ದನೆಂದಾದರೆ, ಈತನು ಪಟ್ಟವೇರದೆ ಈತನ ತಮ್ಮನು ಅರಸನಾಗಲಿಕ್ಕೆ ಕಾರಣವೇನು? ಆತನ ಆಳಿಕೆಯಲ್ಲಿ ಈತನ ಸ್ಥಾನವಾವುದು ? ತಮ್ಮನ ಆಳಿಕೆಯಲ್ಲಿ ಅಣ್ಣನು ಯುವರಾಜನಾಗಿರಲಾಪನೆ? ಎಂಬುದು ಇನ್ನೂ ಇತ್ಯರ್ಥಿಸತಕ್ಕ ವಿಷಯ. ೧೨ ರನ್ನನ ಗದಾಯುದ್ಧದ IV ೧ ನೆಯ ಹಾಗೂ ಆತನ ಅಜಿತ ಪುರಾಣದI. ೫೪ ನೆಯ ಇವೆರಡು ಪದ್ಯಗಳು ತಕ್ಕಷ್ಟು ಸಾಮ್ಯದಿಂದ ಶ್ರವಣಬೆಳ್ಗೊಳದ ನಂ. ೧೪೯ ನೆಯ ಶಾಸನದಲ್ಲಿವೆ.

ಕನ ಕೃತಿಯಲ್ಲಿ ಅವು ತಟ್ಟನೆ ಮೂಡಿರಬೇಕೆಂದೂ ತೋರುವುದರಿಂದ, ಅದು ಪ್ರಕಟವಾಗಿ ಆಗ್ಗೆ ಶಾನೆ ಹೊತ್ತು ಸಂದಿರದು, ಹೇಗಾದರೆ ಈ ಲೇಖಕ್ಕಿಂತ ೧೦ ವರ್ಷಗಳ ಹಿಂದೆ ರಚಿಸಲ್ಪಟ್ಟಿರಬೇಕು, ಅಂದರೆ ಕ್ರಿ. ಶ. 1100–1110ರಲ್ಲಿ ಅದು ರಚಿತವಾಗಿರಬೇಕು.

(೩) ಚನ್ನನು ಚನ್ನರಾಯಪಟ್ಣ ನಂ. 179ನೆಯ ಹಾಗೂ ತರಿಕೆರೆ ನಂ. 45ನೆಯ ಶಾಸನಗಳನ್ನು ರಚಿಸಿದಂತೆ, ನಾಗಚಂದ್ರನೇ ಈ ಬಿಜಾಪುರದ ಲೇಖವನ್ನು ರಚಿಸಿರಬಹುದು— ಆತನು ಮೊತ್ತ ಮೊದಲು ಈ ಶಿಲಾಲೇಖವನ್ನು ರಚಿಸಿ, ಆ ಬಳಿಕ ರಚಿಸಿದ ತನ್ನ ಪಂಪ ರಾಮಾಯಣದಲ್ಲಿ ಅವೆರಡು ಪದ್ಯಗಳನ್ನು ಸೇರಿಸಿಟ್ಟಿರಲೂ ಬಹುದು; ಅಥವಾ ಪಂಪರಾಮಾಯಣವನ್ನು ಮೊತ್ತಮೊದಲು ರಚಿಸಿ, ಅದರಿಂದ ಆ ಪದ್ಯಗಳನ್ನು ತನ್ನ ಈ ಶಿಲಾಲೇಖದಲ್ಲಿ ಆಯ್ದುಕೊಂಡಿರಲೂ ಬಹುದು. ಸುಮಾರು ೬೦ಕ್ಕೆ ಮಿಕ್ಕಿರುವ ಪದ್ಯಗಳು ಆತನ ಮಲ್ಲಿ ನಾಥಪುರಾಣದಲ್ಲಿಯೂ ಪಂಪರಾಮಾಯಣದಲ್ಲಿಯೂ ಸಮಾನವಾಗಿ ರುವುದರಿಂದ (ಅನುಬಂಧ II) ಈ ಬಗೆಯ ಅನುಮಾನಕ್ಕೆ ಬೇಕಾ ದಷ್ಟು ಎಡೆ ಇದೆ. ಹಾಗಾದರೆ ಈ ಶಿಲಾಲೇಖವನ್ನು ರಚಿಸುವಂದು ಕ್ರಿ. ಶ. 1110–1120ರಲ್ಲಿ ನಾಗಚಂದ್ರನಿದ್ದಿರಬೇಕು.

ಈ ಕಾರಣಗಳಿಂದಲೂ ನಾಗಚಂದ್ರನು ಕ್ರಿ. ಶ. 1050ರಿಂದ 1150ರೊಳಗೆ ಇದ್ದಿರಬೇಕೆಂದಾಗುತ್ತದೆ.

IV ನಾಗಚಂದ್ರನ ಮಲ್ಲಿನಾಥಪುರಾಣ ಹಾಗೂ ಪಂಪ ರಾಮಾಯಣದಲ್ಲಿ ಇವರೆಂಟು ಮಂದಿ ಜೈನಯತಿಗಳ ಹೆಸರುಗಳೂ ಸ್ತುತಿಗಳೂ ಇವೆ—

| ಸಂ | ಹೆಸರು | ಮಲ್ಲಿನಾಥಪುರಾಣ | ಪಂಪ ರಾಮಾಯಣ |
|---|---|---|---|
| ೧. | ಅಕಳಂಕಚಂದ್ರ | I. ೧೬. | I ೧೩. |
| ೨ | ವರ್ಧಮಾನ ಭಟ್ಟಾರಕ | I. ೧೭–೧೮. | I. ೧೪–೧೫. |
| ೩. | ಬಾಲಚಂದ್ರ ಮುನಿನಾಥ | I ೧೯-೨೦; X. ೧೩೩ | I. ೧೬–೧೭–೧೮ |
| ೪. | ಮೇಘಚಂದ್ರ ತ್ರೈವಿದ್ಯ | I. ೨೧. | I. ೧೯–೨೦. |
| ೫. | ಶುಭಕೀರ್ತಿ | ಮಲ್ಲಿನಾಥ ಪುರಾಣದಲ್ಲಿ ಈ ನಾಲ್ವರ ಹೆಸರಿಲ್ಲ | I. ೨೧–೨೨. |
| ೬. | ವಾಸುಪೂಜ್ಯ | | I. ೨೩ |
| ೭. | ಶ್ರುತಕೀರ್ತಿ ತ್ರೈವಿದ್ಯ | | I. ೨೪–೨೫. |
| ೮. | ವೀರಣಂದಿ ಸೈದ್ಧಾಂತಿಕ | | I. ೨೬–೨೭. |

ದಿಗಂಬರ ಶಾಖೆಯ ಜೈನರಲ್ಲಿ ಕೊಂಡಕುಂದಾಚಾರ್ಯನೆಂಬ ಯತೀಂದ್ರನ ಪರಂಪರೆಗೆ ಕೊಂಡಕುಂದಾನ್ವಯವೆಂದೂ ಮೂಲ ಸಂಘವೆಂದೂ ಹೆಸರಿದೆ. ಆ ಮೂಲಸಂಘವನ್ನು ಅರ್ಹದ್ಬಲಿ ಎಂಬ ಆಚಾರ್ಯನು ಚತುರ್ವಿಧವಾಗಿ ವಿಭಾಗಿಸಿದಂದಿನಿಂದ ಅದರಲ್ಲಿ ದೇವ-ನಂದಿ-ಸಿಂಹ-ಸೇನ ಎಂಬೀ ೪ ಉಪಸಂಘಗಳಾದುವು.[೧೩] ಆ ಬಳಿಕ ಈ ಪ್ರತ್ಯೇಕ ಸಂಘಗಳು ಗಣ–ಗಚ್ಛ-ವಲಿ (ಬಳಿ) ಗಳೆಂದು ತ್ರಿಧಾ ಭಿನ್ನವಾದುವು.[೧೪] ಇವರಲ್ಲಿ ನಂದಿಸಂಘದ ಯತಿಗಳಿಗೆ **ನಂದಿ–ಚಂದ್ರ–ಕೀರ್ತಿ–ಭೂಷಣ** ಎಂಬೀ ಉಪನಾಮಗಳಿರುವುದರಿಂದ, ಈ ಮೇಲಣ ೮ ಯತಿಗಳಲ್ಲಿ ಅಕಳಂಕ**ಚಂದ್ರ,** ಬಾಲ**ಚಂದ್ರ,** ಮೇಘ**ಚಂದ್ರ,** ಶುಭ**ಕೀರ್ತಿ,** ಶ್ರುತ**ಕೀರ್ತಿ** ಮತ್ತು ವೀರ**ಣಂದಿ** ಎಂಬೀ ಆರ್ವರು ನಂದಿಸಂಘದವರೇ ವಿನಾ ಬೇರಾವ ಸಂಘದವರಲ್ಲವೆಂದು ನಿಶ್ಚಯವಾಗುತ್ತದೆ.

೧೩ ಅರ್ಹದ್ಬಲಿಸ್ಸಂಘಂ ಚತುರ್ವಿಧಂ ಸ ಶ್ರೀಕೋಂಡಕುಂದಾನ್ವಯ ಮೂಲ ಸಂಘಮ್ । ಕಾಲಸ್ವಭಾವಾದಿಹ ಜಾಯಮಾನ ದ್ವೇಷೇತರಾಲ್ಪೀಕರಣಾಯ ಚಕ್ರೇ॥ (ಶ್ರ. ಬೆ. ನಂ. 254) ದೇವನಂದಿ ಸಿಂಹಸೇನ ಸಂಘಭೇದ ವರ್ತಿನಾಂ। ದೇಶ ಭೇದತಃ ಪ್ರಬೋಧಭಾಜಿ ದೇವಯೋಗಿನಾಮ್ ॥ (ಡಿ.ನಂ. 258). ೧೪ 'ಸಂಘೋಷು ತತ್ರ ಗಣಗಚ್ಛ-ವಲಿತ್ರಯೇಣ' (ಡಿ. ನಂ. 254)

ಇವರೆಂಟು ಮಂದಿಯಲ್ಲಿ ಈ ಕೆಳಗೆ ಹೆಸರಿಸಿದ ಐವರನ್ನು ಕುರಿತು ನಾಗಚಂದ್ರನ ಮಲ್ಲಿನಾಥಪುರಾಣ ಹಾಗೂ ಪಂಪರಾಮಾಯಣದಲ್ಲಿ ಯಾವ ಪದ್ಯಗಳಿವೆಯೋ ಆ ಪದ್ಯಗಳೇ ಶ್ರವಣಬೆಳ್ಗೊಳದ ಈ ಕೆಳಗೆ ನಮೂದಿಸಿರುವ ಕೆಲವು ಶಾಸನಗಳಲ್ಲಿ ಅವೇ ಹೆಸರುಳ್ಳ ಜೈನಯತಿಗಳ ಸ್ತುತಿಗಳಲ್ಲಿ ಉದ್ಧೃತವಾಗಿದ್ದು, ಆ ಶಾಸನಗಳಲ್ಲಿ ಅವರನ್ನು ಕುರಿತು ಈ ಕೊಂಚ ವಿವರವೂ ಇದೆ—

| ಸಂ | ನಾಗಚಂದ್ರನು ಸ್ತುತಿಸಿರುವ ಯತಿಗಳು | ಮಲ್ಲಿನಾಥ ಪುರಾಣದಲ್ಲಿ | ಪಂಪ ರಾಮಾಯಣದಲ್ಲಿ | ಶ್ರ. ಬೆ. ಶಾಸನಗಳಲ್ಲಿರುವ ವಿವರ | | |
|---|---|---|---|---|---|---|
| | | | | ನಂ. | ಹೆಸರು | ಗಣ—ಗಚ್ಛ ಇ. |
| ೨. | ವರ್ಧಮಾನ | I. ೧೭-೧೮ | I. ೧೪-೧೫ | 71 | ವರ್ಧಮಾನ | ದೇಶೀಯ ಗಣದ **ಪುಸ್ತಕ** ಗಚ್ಛದ ನಯಕೀರ್ತಿಯಶಿಷ್ಯರಾದ (ಶ್ರ.ಬೆ.) ನಂ. 66 ನ್ನು ನೋಡುವುದು) ಭಾನುಕೀರ್ತಿ ಮತ್ತು ಬಾಲಚಂದ್ರರೊಂದಿಗೆ ಹೇಳಲ್ಪಟ್ಟಿರುತ್ತಾನೆ. |
| ೩. | ಬಾಲಚಂದ್ರ | I. ೨೦ | I. ೧೮ | 158 | ಬಾಲಚಂದ್ರ | |
| ೪. | ಮೇಘಚಂದ್ರ ತ್ರೈವಿದ್ಯ | I. ೨೧ | I. ೨೦ | 127 | ಮೇಘಚಂದ್ರ ತ್ರೈವಿದ್ಯ | ಕೊಂಡಕುಂದಾನ್ವಯ ಮೂಲಸಂಘ ದೇಶೀಯಗಣ **ಪುಸ್ತಕ** ಗಚ್ಛ. |
| | ,, | I. ೨೧ | I. ೧೯-೨೦ | 140 | ,, | |
| ೫. | ಶ್ರುತಕೀರ್ತಿ ತ್ರೈವಿದ್ಯ | | I. ೨೪-೨೫ | 64 | ಶ್ರುತಕೀರ್ತಿ ತ್ರೈವಿದ್ಯ | |
| ೬. | ವೀರಣಂದಿ ಸೈದ್ಧಾಂತಿಕ | | I. ೨೬-೨೭ | 140 | ವೀರಣಂದಿ ಸೈದ್ಧಾಂತಿಕ | |

ಇವರೆಂಟು ಮುಂದಿಯುಲ್ಲಿ ಆಯಾ ಯತಿಯ ಪರಂಪರೆಯ ಶೋಧವನ್ನೂ ಕಾಲವಿಚಾರವನ್ನೂ ಮಾಡುವ ಮುಂಚೆ, ಈ ಕೆಲವು ನಿಸ್ಸಂದೇಹವೆನಿಸುವ ಮಾತುಗಳನ್ನು ಹೇಳಬಹುದು.

(೧) ಯಾವನೊಬ್ಬ ಜೈನ ಯತಿಯಾಗಲಿ ಶ್ರಾವಕನಾಗಲಿ ಕವಿಯಾಗಿದ್ದು ತನ್ನ ಕಾವ್ಯದಲ್ಲಿ ಸ್ತುತಿಸುವುದಾದರೆ ತಾನಾವ ಸಂಘದವನೋ ಯಾವ ಗಣ–ಗಚ್ಛದ ಯತಿಯೋ, ಅಥವಾ ಶ್ರಾವಕನಾದರೆ ತಾನಾವ ಸಂಘದ ಯಾವ ಗಣ–ಗಚ್ಛದ ಯತಿಯ ಅನುಯಾಯಿಯೋ ಆದೇ ಸಂಘದ ಅದೇ ಗಣ–ಗಚ್ಛದ ಯತಿಗಳನ್ನೇ ವಿನಾ ಅನ್ಯಸಂಘದವರನ್ನಲ್ಲ, ತನ್ನ ಸಂಘದಲ್ಲಿಯೇ ಆದರೂ ಅನ್ಯ ಗಣ–ಗಚ್ಛದವರನ್ನಲ್ಲ ಎಂಬುದು ಮನುಷ್ಯಸ್ವಭಾವೋಚಿತವಾಗಿದ್ದು ತುಂಬ ವಾಸ್ತವಿಕವೇ. ಆದರೆ 'ಚಂದ್ರಪ್ರಭ ಪುರಾಣ'ದ (ಕ್ರಿ. ಶ. 1189) ಅಗ್ಗಳನು ತಾನು ಮೂಲಸಂಘ ದೇಶೀಗಣ **ಪುಸ್ತಕ**ಗಚ್ಛ ಕೊಂಡಕುಂದಾನ್ವಯದೊಳ್ ಗಣನೆವಡೆದ'ವನೆಂದು (I, ೫೩) ಹೇಳಿ, ಆ ಕಾವ್ಯದಲ್ಲಿ (I, ೨೧–೩೬) ಆ ದೇಶೀಗಣದ ಪುಸ್ತಕಗಚ್ಛದ ಯತಿಗಳನ್ನೇ ಸ್ತುತಿಸಿರುವ ಎಡೆಯಲ್ಲಿ ತನ್ನ ಹಾಗು ತಾನು ಸ್ತುತಿಸಿರುವ ಆ ಯತಿಗಳ **ನಂದಿ**ಸಂಘದಿಂದ ತೀರ ಭಿನ್ನವಾಗಿರುವ **ಸೇನ**ಸಂಘದ '**ನಯಸೇನ**' (I, ೨೬) ಎಂಬವನನ್ನು ಸ್ತುತಿಸಿರುವುದರಿಂದ, ಇಲ್ಲವೆ ನಯಚಂದ್ರ ಅಥವಾ ನಯಕೀರ್ತಿ ಎಂಬ ಯಾವನೊಬ್ಬ ನಂದಿಸಂಘದ ಯತಿಯ ಹೆಸರು ಸಂಪ್ರತಿಕಾರರ ಕೈತ್ಪ್ಪಿಂದ ನಯಸೇನ ಎಂದು ಆ ಕಾವ್ಯದಲ್ಲಿ ಬರೆದು ಹೋಗಿರಬೇಕು, ಇಲ್ಲವೆ ಅಗ್ಗಳನಿಂದ ಸ್ತುತನಾದವನು ಸೇನಸಂಘದವನೇ ಆಗಿದ್ದರೆ ಜೈನಕವಿಗಳು ತಮ ತಮಗೆ ಮಾನ್ಯರಾದ ತಮ್ಮ ಸಂಘ–ಗಣ–ಗಚ್ಛದ ಯತಿಗಳನ್ನು ಸ್ತುತಿಸುವ ಸಂಪ್ರದಾಯದಲ್ಲಿ ಇದೊಂದು ಅಪವಾದವೆನ್ನಬೇಕು.

(೨) ಸೈದ್ಧಾಂತಿಕ, ತ್ರೈವಿದ್ಯ ಮೊದಲಾದ ಒಂದೋ ಹೆಚ್ಚೋ

ಬಿರುದುಳ್ಳ ಯಾವನೊಬ್ಬ ಜೈನಯತಿ ಯಾವುದೊಂದು ಕಾವ್ಯದಲ್ಲಿ (ಅದರಲ್ಲಿಯೂ ಸಮಸಾಮಯಿಕ ಕಾವ್ಯದಲ್ಲಿ) ಸ್ತುತಿಸಲ್ಪಟ್ಟರೆ ಆತನ ಅನುಯಾಯಿಯಾಗಿರಬೇಕಾದ ಆ ಕವಿ ಆತನ ಅಂಥಾ ಬಿರುದುಗಳಲ್ಲಿ ಒಂದೇ ಒಂದನ್ನಾದರೂ ಮರೆಯದೆ ಅವನ್ನು ಚಾಚೂ ತಪ್ಪದೆ ಹೇಳುವನೆಂಬುದು ಸ್ವಭಾವಸಿದ್ಧವೆಂಬುದರಿಂದ, ಆ ಕಾವ್ಯದಲ್ಲಿ ಯಾವ ಹೆಸರಿನ ಯತಿ ಯಾವ ಬಿರುದುಗಳೊಂದಿಗೆ ಸ್ತುತಿಸಲ್ಪಟ್ಟಿರುತ್ತಾನೋ ಅದೇ ಹೆಸರೂ ಅದೇ ಬಿರುದೂ ಉಳ್ಳ ಯತಿಯೊಬ್ಬನು ಸಮಸಾಮಯಿಕ ಇತಿಹಾಸದಲ್ಲಿಯೂ ಹೇಳಲ್ಪಟ್ಟಿದ್ದರೆ, ಆತನೂ ಈತನೂ ಒಬ್ಬನೇ ವ್ಯಕ್ತಿ ಎಂಬಲ್ಲಿ ಸಂಶಯವಿಲ್ಲ. ಹಾಗೆಯೇ ಬಿರುದುಗಳೇನೂ ಇಲ್ಲದೆ ಬರೇ ಮುನಿ, ಯತಿ, ವ್ರತಿ ಎಂಬಿಷ್ಟೇ ಹೆಸರಿಂದ ಜೈನಯತಿಗಳಾರಾದರೂ ಕಾವ್ಯಗಳಲ್ಲಿ ಹೆಸರಿಸಲ್ಪಟ್ಟರೆ ಅವರಿಗೆ ಬಿರುದುಗಳಿದ್ದಿಲ್ಲ ಎಂಬುದೂ ವಾಸ್ತವಿಕವೇ.

(೩) ಆದುದರಿಂದ ಅಂಥಾ ಯಾವನೊಬ್ಬ ಯತಿಯು ಸಮಕಾಲೀನನಾಗಿ ಆತನ ಸನಾಮನಾದ ಯಾವನಿನ್ನೊಬ್ಬ ಯತಿ ಇದ್ದು ಈತನಿಗೆ ಬಿರುದುಗಳಿದ್ದರೆ, ಆ ಕಾವ್ಯದಲ್ಲಿ ಹೆಸರಿಸಲ್ಪಟ್ಟವನಿಗೆ ಬಿರುದೇನೂ ಇಲ್ಲ ಎಂಬುದರಿಂದ, ಬಿರುದುಳ್ಳ ಈತನನ್ನು ಬಿಟ್ಟು ಬಿರುದಿಲ್ಲದ ಆತನೇ ಆ ಕವಿಯಿಂದ ಸ್ತುತನಾದ ವ್ಯಕ್ತಿ ಎಂದು ತಿಳಕೊಳ್ಳಬೇಕು.

(೪) ಯಾವುದೊಂದು ಪ್ರಸಿದ್ಧ ಕಾವ್ಯದಲ್ಲಿ ಯಾವನೊಬ್ಬ ಜೈನಯತಿ ಯಾವ ಪದ್ಯಗಳಿಂದ ಸ್ತುತಿಸಲ್ಪಟ್ಟಿರುವನೋ ಅದೇ ಪದ್ಯಗಳಿಂದ ಅದೇ ಹೆಸರಿನವನು ಇತರತ್ರ ಶಾಸನವೇ ಮೊದಲಾದವುಗಳಲ್ಲಿ ಸ್ತುತಿಸಲ್ಪಟ್ಟರೆ, ಅವರಿಬ್ಬರೂ ಸರ್ವಥಾ ಒಬ್ಬನೇ ವ್ಯಕ್ತಿ ವಿನಾ ಎಂದಿಗೂ ಅನ್ಯಾನ್ಯ ವ್ಯಕ್ತಿಗಳಲ್ಲ ಎಂಬುದೂ ವಾಸ್ತವಿಕವೇ. ಆದುದರಿಂದ ಯಾವನೊಬ್ಬ ಯತಿಯನ್ನು ಯಾವೊಂದು ಕಾವ್ಯದಲ್ಲಾಗಲಿ

ಶಾಸನದಲ್ಲಾಗಲಿ ಸ್ತುತಿಸಿರುವ ಪದ್ಯಗಳು ಬೇರೆಲ್ಲಿಯಾದರೂ ಕಾಣ ಬಂದರೆ ಅವು ಆತನಿಗೆಸೇ ವಿನಾ ಬೇರೆ ಯಾವಾತನಿಗೂ ಹೊಂದಿಕೆ ಯಾಗವು.

ಈಗ ನಾಗಚಂದ್ರನ ಖಾಸಾ ಗುರುವಾಗಿದ್ದ ಬಾಲಚಂದ್ರ ಮುನಿ ಎಂಬಾತನು ಯಾರಾಗಿರಬಹುದು ಎಂಬುದನ್ನು ವಿಚಾರಿಸು ವಲ್ಲಿ, ಬಾಲಚಂದ್ರ ಎಂಬ ಹೆಸರುಳ್ಳ ಈ ಹಲವು ಮಂದಿ ಯತಿಗಳಿದ್ದ ರೆಂದು ತೋರುವುದರಿಂದ, ಇವರಲ್ಲಿ ಯಾವಾತನು ನಾಗಚಂದ್ರನ ಗುರುವಾಗಿರಬೇಕೆಂದು ನೋಡುವ.

(೧) ಶ್ರ. ಬೆ. ಸಂ. 334— 'ಶ್ರೀಮನ್ಮಹಾಮಂಡಲಾಚಾ ರ್ಯರುಂ........ಮೂಲಸಂಘದ ಇಂಗಳೇಶ್ವರ ದೇಸಿಯ ಗಣಾಗ್ರ ಗಣ್ಯರುಂ ರಾಜಗುರುಗಳುಮಪ್ಪ ನೇಮಿಚಂದ್ರ ಪಂಡಿತ ದೇವರ ಶಿಷ್ಯರು ಬಾಳಚಂದ್ರದೇವರು.'[೧೫] ಈ ಬಾಳಚಂದ್ರನು ಶಾ. ಶ. ೧೨೦೪ನೆಯ ಚಿತ್ರಭಾನು ಸಂ। ಶ್ರಾವಣಶುದ್ಧ ೧೦ ಬೃ (ಬೃಹಸ್ಪತಿ ವಾರ) ಅಂದರೆ ಕ್ರಿ. ಶ. 1282ನೆಯ ಜೂಲಾಯಿ ತಾ. 16ರಲ್ಲಿ ಇದ್ದ ನೆಂದು ಅದೇ ಶಾಸನದಿಂದ ತೋರುವುದರಿಂದ, ಕ್ರಿ. ಶ. 1050ರಿಂದ 1150ರೊಳಗೆ ಇದ್ದ ನಾಗಚಂದ್ರನ ಗುರುವಾದ ಬಾಲಚಂದ್ರನು ಈತನೆಂದಿಗೂ ಆಗಿರಲಾರನು.

---

೧೫ 'ಶ್ರೀಮನ್ಮಹಾ ಮಂಡಳಾಚಾರ್ಯರುಂ ರಾಜಗುರುಗಳೆನಿಪ ಬೆಳಕುಂಬದ ಶ್ರೀನೇಮಿಚಂದ್ರ ಪಂಡಿತ...ಅವರ ಪ್ರಿಯ ಶಿಷ್ಯರಪ್ಪ ಶ್ರೀಮದ್ಬಾಳಚಂದ್ರದೇವ' ಎಂದು ಶ್ರ. ಬೆ. ೩೮೯ರಲ್ಲಿ ಹೇಳಿರುವಾತನೂ ಈತನೆಂದೇ ತೋರುವುದರಿಂದ, ಅದ ರಲ್ಲಿ ಶಾ. ಶ. ೧೧೩೬ನೆಯ ಶ್ರೀಮುಖ ಸಂ । ಕಾರ್ತಿಕ ಶುಕ್ಲ ೫ ಸೋ (ಮವಾರ) ಅಂದರೆ ಕ್ರಿ. ಶ. ೧೨೧೪ನೆಯ ಅಕ್ಟೋಬರ ೨೧ನೆಯ ತಾರೀಕಿನಂದು 'ತಿಃಬ್ರಜ್ಜರ' ದಿಂದ ಮೃತನಾದವನೆಂದುಹೇಳಿರುವಾತನು ಬಾಳಚಂದ್ರನಾಗಿರಲಾರನು.(ಇಂಗ್ಲೀಷು ಅನುವಾದದಲ್ಲಿ ಹಾಗೆ ಮೃತನಾದವನು ಬಾಳಚಂದ್ರನೆಂದು ಬರೆದಿರುವುದು ತಪ್ಪಾಗಿರ ಬೇಕು.)

(೨) ಜನ್ನನ ಅನಂತನಾಥಪುರಾಣದಲ್ಲಿ (I, ೩೭–೩೩) ಸ್ತುತನಾಗಿರುವ **ಕವಿಕಂದರ್ಪ**ನೆಂಬ ಬಿರುದುಳ್ಳ ಬಾಲಚಂದ್ರನು ಮಾಧವಚಂದ್ರ ತ್ರೈವಿದ್ಯನ ಶಿಷ್ಯನೆಂದು ಅಲ್ಲಿ ಹೇಳಿರುವುದರಿಂದ ಈತನೊಬ್ಬ ಯತಿಮಾತ್ರವಲ್ಲ, ಕವಿಯೂ ಆಗಿರಬೇಕು. ಈತನು ಸೌಂದತ್ತಿಯ ರಟ್ಟರಾಜನಾದ IV ಕಾರ್ತವೀರ್ಯನ(1199–1218) ಕಾಲದ ೨ ಶಿಲಾಲೇಖಗಳ (ಕ್ರಿ. ಶ. 1204) ರಚಕನೆಂದು ತಿಳಿಯುವುದರಿಂದ,[೧೬] ಕ್ರಿ. ಶ. 1150 ರಿಂದ ಈಚೆಯಲ್ಲಿ ಇದ್ದಿರಬೇಕೆಂದಾಗುತ್ತದೆ. ಈ ಕಾರಣದಿಂದಲೂ ನಾಗಚಂದ್ರನ ಗುರುವಾದ ಬಾಲಚಂದ್ರನಿಗೆ 'ಕವಿಕಂದರ್ಪ'ನೆಂಬ ಬಿರುದಿದ್ದಿಲ್ಲವೆಂಬ ಕಾರಣದಿಂದಲೂ ಈ ಕವಿಕಂದರ್ಪ ಬಾಲಚಂದ್ರನು ನಾಗಚಂದ್ರನ ಗುರುವಾಗಿರಲಾರನು.

(೩) ಬೇಲೂರು ಸಂ. 131 [೧೭]— ಇದರಲ್ಲಿ ಬಾಳಚಂದ್ರಪಂಡಿತನೆಂಬೊಬ್ಬ ಜೈನಯತಿಯ ಪೀಳಿಗೆಯನ್ನು ಹೀಗೆ ಹೇಳಿದೆ–




ಈತನು ಶಾ. ಶ. ೧೧೯೭ನೆಯ ಭಾವ ಸಂ। ಭಾದ್ರಪದ ಶುಕ್ಲ ೧೨ ಬುಧವಾರದಂದು (4ನೆಯ ಸಪ್ತಂಬರ 1275) ಸಮಾಧಿಹೊಂದಿದನೆಂದು ಅದೇ ಶಾಸನದಿಂದ ತಿಳಿಯುವುದರಿಂದ, ಈತನೂ ನಾಗಚಂದ್ರನ ಗುರುವಾದ ಬಾಲಚಂದ್ರನಾಗಿರಲಾರನು.

---

೧೬ ಕರ್ಣಾಟಕ ಕವಿಚರಿತೆ 1 (ಪು. ೪೨೧). ೧೭ E. C. V.

(೪) ಮತ್ತು (೫) ಶಿವಮೊಗ್ಗೆ ನಂ. 4—[೧೮] 'ಸಿಂಹನಂದಿ ಮುನಿ। ಅವರ್ ತದನಂತರಂ ಅರ್ಹದ್ಬಲ್ಯಾಚಾರ್ಯರುಂ ಬೆಟ್ಟದ ದಾಮನಂದಿ ಭಟ್ಟಾರಕರುಂ ಬಾಳಚಂದ್ರ ಭಟ್ಟಾರಕರುಂ ಮೇಘಚಂದ್ರ ತ್ರೈವಿದ್ಯದೇವರುಂ ಗುಣಚಂದ್ರ ಪಂಡಿತದೇವರಿಂದ........ ಬಳಿಕ..........ಶ್ರೀಮೂಲಸಂಘದ ಕೊಂಡಕುಂದಾನ್ವಯದ ಮೇಷಪಾಷಾಣಗಚ್ಛದ ಪ್ರಭಾಚಂದ್ರದೇವರ್' ಎಂದು, ಆ ಬಳಿಕ ಈ ಪೀಳಿಗೆ ಇದೆ—




**ತ್ರೈವಿದ್ಯ** ಬಾಳಚಂದ್ರ (II)

(ಇದೇ ಬಗೆಯ ವಿವರವು ಶಿವಮೊಗ್ಗೆ ನಂ. 57 ಹಾಗೂ 64ನೆಯ ಶಾಸನಗಳಲ್ಲಿಯೂ ಇದೆ.) ಈ ಶಿವಮೊಗ್ಗೆ ನಂ. 4ನೆಯ ಶಾ. ಶ. ೧೦೪೩ ಶುಭಕೃತು ಸಂ। ಅಂದರೆ ಕ್ರಿ. ಶ. 1122ನೆಯ ಶಾಸನದಿಂದ ನನ್ನಿಯಗಂಗನೆಂಬವನು ಆಗ್ಗೆ II ಪ್ರಭಾಚಂದ್ರನ ಶಿಷ್ಯನಾಗಿದ್ದನೆಂದು ತಿಳಿಯುವುದರಿಂದ, ಅದರಲ್ಲಿ ಹೇಳಲ್ಪಟ್ಟಿರುವ ತ್ರೈವಿದ್ಯ ಬಾಳಚಂದ್ರನು ಆಗ್ಗೆ ಇದ್ದಿರಬೇಕು; ಆದರೆ I ಪ್ರಭಾಚಂದ್ರನಿಗಿಂತ ಹಿಂದೆ ಹೇಳಲ್ಪಟ್ಟಿರುವ ಆ ಇನ್ನೊಬ್ಬ ಬಾಳಚಂದ್ರನು ಎಷ್ಟು ವರ್ಷ

---

೧೮ E. C. VII.


ವೇಂದ್ರ ಸಿದ್ಧಾಂತದೇವ
ಷಭನಂದಿ ಅಥವಾ ಚತುರ್ಮುಖದೇವ
ಗೋಪನಂದಿ
ಮಹೇಂದ್ರಚಂದ್ರ
ದೇವೇಂದ್ರ ಸಿದ್ಧಾಂತದೇವ
ಶುಭಕೀರ್ತಿ
ಮಾಘನಂದಿ ಸಿದ್ಧಾಂತದೇವ
ಜಿನಚಂದ್ರ
ಗುಣಚಂದ್ರ
ಜಸಕೀರ್ತಿ
ವಾಸವಚಂದ್ರ
ಚಂದ್ರನಂದಿ
ಹೇಮಚಂದ್ರ
ತ್ರಿಮುಷ್ಟಿದೇವ
ತ್ರಿರತ್ನನಂದಿ
ಕಲ್ಯಾಣಕೀರ್ತಿ
ಮೇಘಚಂದ್ರ ಪಂಡಿತ
ಬಾಳಚಂದ್ರ ಸಿದ್ಧಾಂತದೇವ

ಗಳ ಹಿಂದೆ ಆಗಿಹೋದನೇನೋ ತಿಳಿಯದು. ಇದರಲ್ಲಿ ಹೇಳಿರುವ II ಬಾಳಚಂದ್ರನಿಗೆ ತ್ರೈವಿದ್ಯನೆಂದು ಬಿರುದಿದ್ದುದರಿಂದ, ಆತನು ನಾಗಚಂದ್ರನ ಗುರುವಾದ ತ್ರೈವಿದ್ಯನೆಂಬ ಬಿರುದಿಲ್ಲದ ಬಾಲಚಂದ್ರನಾಗಿರಲಾರನು; I ಬಾಳಚಂದ್ರನು ಕ್ರಿ. ಶ. 1050ಕ್ಕೆ ಸಾಕಷ್ಟು ಹಿಂದೆಯೇ ಇದ್ದಿರುವಂತೆ ತೋರುವುದರಿಂದ ಆತನನ್ನೂ ನಾಗಚಂದ್ರನ ಗುರುವಾಗಿರಬಹುದೆಂದು ಒಪ್ಪಿಕೊಳ್ಳಲಾಗುವುದಿಲ್ಲ.

(೬) ಶ್ರ. ಬೆ. ಸಂ. ೬೯—ಇದರಲ್ಲಿ ದೇಶೀಯಗಣದ ವಕ್ರಗಚ್ಛದ ಬಾಲಚಂದ್ರನನ್ನು ಕುರಿತು ಹೀಗಿದೆ—

ಸ್ಥೇಯಾದ್ವಿಶ್ರುತ ಬಾಳಚಂದ್ರಮುನಿಪಃ ಶ್ರೀವಕ್ರಗಚ್ಛಾಧಿಪಃ
ಶ್ರೀಮೂಲಸಂಘ ಕಮಳಾಕರರಾಜಹಂಸೋ

---

ಶ್ರೀವಕ್ರಗಚ್ಛತಿಳಕೋ ಮುನಿ ಬಾಳಚಂದ್ರಃ ॥
ವಿಶ್ರುತ ಬಾಳಚಂದ್ರ ಮುನಿಪ **ಸ್ಸಿದ್ಧಾಂತ ಚಕ್ರಾಧಿಪಃ** ॥

ಅದರಲ್ಲಿ ಹೇಳಿರುವಂತೆ ಆತನ ಪೀಳಿಗೆ ಹೀಗಿದೆ— §

ಕಡವಯ್ಯನ ದೇವಿಸೆಟ್ಟಿಯ ಗುರುವೆಂದಿರುವ ಬಾಲಚಂದ್ರನ ಪೀಳಿಗೆ ಕಲಸಾಪುರದ ಶಾಸನದಲ್ಲಿ[೧೯] ಹೀಗಿದೆ—




§ ಎದುರಿಗಿರಿಸಿರುವ ಪಟ್ಟಿಯನ್ನು ನೋಡಿರಿ.

೧೯ Mysore Archaeololgical Report (M. A. R.) 1923 (ಪು. ೩೮)

ಶ್ರ. ಬೆ. ೬೯ನೆಯ ಶಾಸನದ ಪೀಳಿಗೆಯನ್ನೂ ಈ ಕಲಸಾಪುರದ ಶಾಸನದ ಪೀಳಿಗೆಯನ್ನೂ ಹೋಲಿಸುವೊಡನೆಯೇ ಇವೆರಡೂ ಒಂದೇ ಎಂದು ವ್ಯಕ್ತವಾಗುವುದರಿಂದ, ಇದೂ ವಕ್ರಗಚ್ಛದ ಪೀಳಿಗೆಯೇ;ಅತ ಏವ ಈ ಬಾಲಚಂದ್ರ ಸೈದ್ಧಾಂತಿಕನು ವಕ್ರಗಚ್ಛದವನೇ, ಶ್ರ. ಬೆ. ೬೯ರಲ್ಲಿ ಬಾಳಚಂದ್ರ ಸಿದ್ಧಾಂತದೇವನೆಂದಿರುವಾತನೂ ಈತನೇ; ಅಲ್ಲಿ ಈತನನ್ನು ಶ್ರೀಮೂಳ ಸಂಘ **ಕಮಲಾಕರ ರಾಜಹಂಸೋ,** ಎಂದದೆಯಾದರೆ ಕಳಸಾಪುರದ ಈ ಶಾಸನನಲ್ಲಿ 'ಶ್ರೀಮೂಲಸಂಘ **ಪದ್ಮಾಕರ ರಾಜಹಂಸೋ**' ಎಂದದೆ. ಕಲಸಾಪುರದ ಶಾಸನದಿಂದ ಈತನು ಶಾ. ಶ. ೧೧೯೮ನೆಯ ದುರ್ಮುಖಿ ಸಂ। ದಲ್ಲಿ (ಕ್ರಿ. ಶ. 1176) ಇದ್ದನೆಂದು ತಿಳಿಯುತ್ತದೆ. ಇದೇ ಕವಡಮಯ್ಯನ ದೇವಿಸೆಟ್ಟಿ ಕಟ್ಟಿಸಿದ ಶಾಂತಿನಾಥ ಬಸದಿಯ ಉಲ್ಲೇಖವುಳ್ಳ ಬೇಲೂರು ನಂ. 129ನೆಯ ಶಾಸನದಲ್ಲಿ[೨೦] ಈತನನ್ನು ಮಾಂಡವಿಯ ಬಾಳಚಂದ್ರ ಸಿದ್ಧಾಂತದೇವನೆಂದದೆ, ಮತ್ತು ಅದರಲ್ಲಿ ಈತನ ಶಿಷ್ಯನಾದ ರಾಮಚಂದ್ರನೆಂಬ ಯತಿ ಹೊಯ್ಸಳ ವೀರಬಲ್ಲಾಳರಾಯನ ಆಳಿಕೆಯ (1173-1220) ನಳ ಸಂ। ಕಾರ್ತಿಕ ಶುಕ್ಲ ೧ ಬೃಹವಾರದಂದು (ಕ್ರಿ. ಶ. 1196ನೆಯ ಅಕ್ಟೋಬರ 24 ಗುರುವಾರ ಆಚಾರ್ಯ ಸ್ಥಾನದಲ್ಲಿ ಇದ್ದನೆಂದು ತಿಳಿಯುವುದರಿಂದ, ಆತನ ಗುರುವಾದ ಈ ವಕ್ರಗಚ್ಛದ ಬಾಳಚಂದ್ರ ಸಿದ್ಧಾಂತದೇವನು ಕ್ರಿ ಶ. 1176 ರಿಂದ 1196ರೊಳಗೆ ಮೃತವಾಗಿರಬೇಕು. ಸೈದ್ಧಾಂತಿಕನಾದ ಈ ಬಾಲಚಂದ್ರನು ನಾಗಚಂದ್ರನ ಗುರುವಾದ ಏನೂ ಬಿರುದಿಲ್ಲದ ಬಾಲಚಂದ್ರನಾಗಿರಲಾರನು ಮಾತ್ರವಲ್ಲ, ನಾಗಚಂದ್ರನು ತನ್ನ ಗುರುವಾದ ಬಾಲಚಂದ್ರನನ್ನು ಚಂದ್ರನೊಡನೆ ಉಪಮಿಸಿ ಸ್ತುತಿಸುವಲ್ಲಿ (ಮಲ್ಲಿ I ೨೦; ಪಂ. ರಾ. I ೧೮) '**ಅಕುಟಿಳರ್**' ಎಂದಿರುವುದ

೨೦ E. C. V.

ಶ್ರ. ಬೆ. ನಂ ೬೬

ಮಾಘನಂದಿ
- ಗುಣಚಂದ್ರ ಸಿದ್ಧಾಂತಚಕ್ರವರ್ತಿ
  - ನಯಕೀರ್ತಿ ಸಿದ್ಧಾಂತಚಕ್ರವರ್ತಿ
    - ಮೇಘಚಂದ್ರ ವ್ರತೀಂದ್ರ
    - ಮಲಧಾರಿ ಸ್ವಾಮಿ
    - ಶ್ರೀಧರದೇವ
    - ದಾಮನಂದಿ ತ್ರೈವಿದ್ಯ
    - ಭಾನುಕೀರ್ತಿ ಸಿದ್ಧಾಂತಚಕ್ರವರ್ತಿ
    - ಬಾಲಚಂದ್ರಮುನಿ
    - ಮಂತ್ರವಾದಿ ಪದ್ಮನಂದಿ
    - ಪ್ರಭಾಚಂದ್ರ
    - ನೇಮಿಚಂದ್ರ

ರಿಂದ, **ವಕ್ರ (=ಕುಟಿಲ)** ಗಚ್ಛದವರಿಗೆ ಸಲ್ಲದ ಈ ಬಗೆಯ ಗುಣವಾಚಿಯ ಪ್ರಯೋಗದಿಂದ, ಆತನ ಗುರು ವಕ್ರಗಚ್ಛದವನೆಂದಿಗೂ ಆಗಿರಲಾರನೆಂದು ಬೇಕಾದಷ್ಟು ವಿಶದವಾಗುತ್ತದೆ.

(೭) ದೇಶೀಯಗಣದ ಪುಸ್ತಕಗಚ್ಛದ ನಯಕೀರ್ತಿ ಸಿದ್ಧಾಂತ ಚಕ್ರವರ್ತಿಯ ಶಿಷ್ಯನಾದ **ಅಧ್ಯಾತ್ಮಿ** ಅಥವಾ **ಆಧ್ಯಾತ್ಮಿಕ** ಎಂದು ಬಿರುದುಳ್ಳ ಬಾಲಚಂದ್ರನ ಪರಂಪರೆ ಹೀಗದೆ— †

ಇದೇ ಪರಂಪರೆ ಕೆಲಕೆಲವು ಹೆಸರುಗಳನ್ನು ಬಿಟ್ಟು ಶ್ರ. ಬೆ. ನಂ, 330, 331, 333 ಮತ್ತು 335ನೆಯ ಶಾಸನಗಳಲ್ಲಿಯೂ ಇದೆ. ಶ್ರ. ಬೆ. ನಂ. 327ರಲ್ಲಿ

ನಯಕೀರ್ತಿಸಿದ್ಧಾಂತ ಚಕ್ರೇಶ

|

ಭಾನುಕೀರ್ತಿ | ಪ್ರಭಾಚಂದ್ರ | ಮಾಘನಂದಿ | ಪದ್ಮನಂದಿ | ನೇಮಿಚಂದ್ರ | **ಆಧ್ಯಾತ್ಮಿಕ** ಬಾಳಚಂದ್ರ

ಎಂದೂ, ಚನ್ನರಾಯಪಟ್ಣ ನಂ. 150ನೆಯದರಲ್ಲಿ ೨೧

ಗುಣಚಂದ್ರ ಸಿದ್ಧಾಂತದೇವ

|

ನಯಕೀರ್ತಿ ಸಿದ್ಧಾಂತದೇವ

|

**ಅಧ್ಯಾತ್ಮಿ** ಬಾಳಚಂದ್ರ

ಎಂದೂ ಇರುವುದರಿಂದ, ನಯಕೀರ್ತಿ ಸಿದ್ಧಾಂತದೇವನ ಶಿಷ್ಯನಾದ ಈ ಬಾಲಚಂದ್ರನು ಅಧ್ಯಾತ್ಮಿ ಅಥವಾ ಆಧ್ಯಾತ್ಮಿಕನೆಂಬ ಬಿರುದುಳ್ಳವನೆಂಬಲ್ಲಿ ಸಂಶಯವಿಲ್ಲ; ಅತ ಏವ ಈತನು ನಾಗಚಂದ್ರನ ಗುರುವಾಗಿರಲಾರನೆಂಬಲ್ಲಿಯೂ ಸಂಶಯವಿಲ್ಲ. ಶ್ರ. ಬೆ. ನಂ. 66ರಲ್ಲಿ ಹೇಳಿರುವಂತೆ ನಯಕೀರ್ತಿ ಸಿದ್ಧಾಂತ ಚಕ್ರವರ್ತಿ ದಿವಂಗತನಾದುದು ಶಾ. ಶ. ೧೧೯೯ನೆಯ ದುರ್ಮುಖಿ ಸಂ। ವೈಶಾಖ ಶು. ೧೪ ಶನಿವಾರ

† ಎದುರಿಗಿರಿಸಿರುವ ಪಟ್ಟಿಯನ್ನು ನೋಡಿರಿ. ೨೧ Ibid.

ದಂದು (24ನೆಯ ಎಪ್ರೀಲು 1176). ಚನ್ನರಾಯಪಟ್ಣ ಸಂ. 150 ರಿಂದಲೂ ಶ್ರ. ಬೆ. ಸಂ. 327ರಿಂದಲೂ ಅಧ್ಯಾತ್ಮಿ ಬಾಳಚಂದ್ರನು ಶಾ. ಶ. ೧೧೦೪ನೆಯ ಪ್ಲವ ಸಂ। ಪೌಷ್ಯ ಬಹುಳ ೩ ಉತ್ತರಾಯಣ ಸಂಕ್ರಾಂತಿಯಂದು ಇದ್ದನೆಂದೂ, ಕಾಂತರಾಜಪುರದ ಶಿಲಾಶಾಸನ ದಿಂದ[೨೨] ಆತನು ಹೊಯ್ಸಳ ವೀರಬಲ್ಲಾಳನ ಆಳಿಕೆಯಲ್ಲಿ ಶ್ರೀಮುಖ ಸಂ। ದಲ್ಲಿ (ಕ್ರಿ. ಶ. 1213) ಇದ್ದನೆಂದೂ ತಿಳಿಯುತ್ತದೆ. ಈತನನ್ನು ಚನ್ನರಾಯಪಟ್ಣ ಸಂ. 150ರಲ್ಲಿಯೂ ಶ್ರ. ಬೆ. ಸಂ. 155ರಲ್ಲಿಯೂ 'ಪರಮಾಗಮವಾರಿಧಿ' ಎಂಬ ಕಂದಪದ್ಯದಿಂದ ಸ್ತುತಿಸಿದೆ. ಬೊಪ್ಪಣ ಪಂಡಿತನಿಂದ ಗೊಮ್ಮಟ ಸ್ತುತಿ (ಶ್ರ. ಬೆ. 234) ಯನ್ನು ಒರೆಯಿ ಸಿದ 'ಅಧ್ಯಾತ್ಮಕಳಾಧರ' ಬಾಳಚಂದ್ರನೆಂಬವನು ಈತನೇ. ನಾಗ ಚಂದ್ರನ ಗುರುವಾದ ಬಾಲಚಂದ್ರನು ಮಾತ್ರ ಈತನಾಗಿರಲಾರನು.

(೮) ಶ್ರ. ಬೆ. ಸಂ. 153ನೆಯ ಶಾಸನದಲ್ಲಿ ಒಬ್ಬ 'ಬಾಳಚಂದ್ರ ಮುನಿಪ'ನ ಹೆಸರಿದೆ ಮಾತ್ರವಲ್ಲ, ಆತನನ್ನು ಮಲ್ಲಿನಾಥಪುರಾಣದ 1. ೨೦ ಹಾಗೂ ಪಂಪರಾಮಾಯಣದ I. ೧೯ನೆಯ 'ಪ್ರಚುರ ಕಲಾ ನ್ವಿತರಕುಟೀರಾ' ಎಂಬಾ ಕಂದಪದ್ಯದಿಂದಲೇ ಸ್ತುತಿಸಿದೆ; ಅತ ಏವ ಈ ಬಾಲಚಂದ್ರನೇ ನಾಗಚಂದ್ರನ ಗುರುವಾಗಿರಬೇಕೆಂಬಲ್ಲಿ ಸಂಶಯ ವಿಲ್ಲ. ಆದರೆ ಈ ಶಾಸನದ ಬರೆಹವು ಅಲ್ಲಲ್ಲಿ ಸವೆದು ಹೋಗಿರುವು ದರಿಂದ ಈ ಬಾಲಚಂದ್ರನನ್ನು ಕುರಿತು ಯಾವ ವಿವರವೂ ತಿಳಿಯದು, ಇದರಲ್ಲಿ ತೇದಿಯೂ ಇಲ್ಲ.

(೯) ಶ್ರ. ಬೆ. 140ನೆಯ ಶಾಸನದಿಂದ 'ಶ್ರೀಮೂಲ ಸಂಘ ಕೃತ **ಪುಸ್ತಕ** ಗಚ್ಛ ದೇಶೀಯೋದ್ಯದ್ಗಣ'ದಲ್ಲಿ ಅಭಯನಂದಿಯ ಶಿಷ್ಯನಾದ ಸಕಲಚಂದ್ರನಿಗೆ ಮೇಘಚಂದ್ರತ್ರೈವಿದ್ಯನೆಂಬ ಶಿಷ್ಯನಿದ್ದ ನೆಂದೂ, ಆತನಿಗೆ ಪ್ರಭಾಚಂದ್ರ ಮತ್ತು ವೀರಣಂದಿ ಸೈದ್ಧಾಂತಿಕ

---

೨೨. M. A. R. 1927 (ಪು. 46)

ರೆಂದು ಇಬ್ಬರು ಶಿಷ್ಯರಿದ್ದರೆಂದೂ, ಆ ಮೇಘಚಂದ್ರತ್ರೈವಿದ್ಯನು ತಾನೇ 'ಬಾಳಚಂದ್ರ ಮುನಿರಾಜ ಪವಿತ್ರ ಪುತ್ರ'ನಾದ ಶುಭಕೀರ್ತಿ ಎಂಬಾತನ ಸಧರ್ಮನಾಗಿದ್ದನೆಂದೂ ತಿಳಿಯುತ್ತದೆ. ಇಲ್ಲಿ ಶುಭಕೀರ್ತಿ ಮೇಘಚಂದ್ರನ ಸಧರ್ಮನೆಂದು ಇದೆಯೇ ವಿನಾ, ಆ ಮೇಘಚಂದ್ರನು ಶುಭಕೀರ್ತಿಯ ಗುರುವಾದ ಬಾಲಚಂದ್ರನ ಶಿಷ್ಯನೆಂದಿಲ್ಲ ಎಂಬುದರಿಂದ, (ಈ ಮೇಲೆ ಹೇಳಿದ ಬೇಲೂರು ಸಂ. 131ನೆಯ ಶಾಸನದಲ್ಲಿಯ ಬಾಳಚಂದ್ರಪಂಡಿತನು ನೇಮಿಚಂದ್ರ ಹಾಗೂ ಅಭಯಚಂದ್ರ ಎಂಬವರಿಬ್ಬರ ಶಿಷ್ಯನಾಗಿದ್ದನೆಂದು ಕಂಡಿರುವಂತೆ) ಶುಭಕೀರ್ತಿಯೂ ಬಾಲಚಂದ್ರನ ಶಿಷ್ಯನಷ್ಟೇ ಅಲ್ಲ, ಮೇಘಚಂದ್ರನ ಗುರುವಾಗಿದ್ದ ಸಕಲಚಂದ್ರನ ಶಿಷ್ಯನೂ ಆಗಿದ್ದು ಆ ಕಾರಣದಿಂದ ಮೇಘಚಂದ್ರನ ಸಧರ್ಮನಾಗಿರಬೇಕು. ಹಾಗಾದರೆ ಈ ಯತಿಗಳ ಪೀಳಿಗೆ ಹೀಗಾಗುತ್ತದೆ—




ಈ ಶಾಸನದಲ್ಲಿ ಬಾಲಚಂದ್ರಮುನಿರಾಜನನ್ನು ಕುರಿತು ಬೇರೇನೂ ವಿವರವಿಲ್ಲ, ಆತನ ಗುರು ಯಾರೆಂದು ಕೂಡ ಹೇಳಿಲ್ಲವಾದರೂ, ಇದರಲ್ಲಿ ಹೇಳಿರುವ ಮೇಘಚಂದ್ರ ತ್ರೈವಿದ್ಯನು ಪಂಪರಾಮಾಯಣದ I. ೧೯–೨೦ನೆಯ ಪದ್ಯಗಳಿಂದಲೂ, ವೀರಣಂದಿ ಸೈದ್ಧಾಂತಿಕನು ಪಂಪರಾಮಾಯಣದ I. ೨೬–೨೭ನೆಯ ಪದ್ಯಗಳಿಂದಲೂ ಸ್ತುತಿಸಲ್ಪಟ್ಟಿರುವುದರಿಂದ, ಇವರಿಬ್ಬರೂ ನಾಗಚಂದ್ರನು

ಸ್ತುತಿಸಿರುವ ವ್ಯಕ್ತಿಗಳೇ ವಿನಾ ಅನ್ಯರಾರೂ ಅಲ್ಲವೆಂಬುದು ನಿಶ್ಚಯ. ಹೀಗೆ ಆತನಿಂದ ಸ್ತುತರಾದ ಇವರಿಬ್ಬರ ಹೆಸರ ಜತೆಯಲ್ಲಿ ನಾಗಚಂದ್ರನ ಗುರುವಾದ 'ಮುನಿನಾಥ' (ಮಲ್ಲಿ X. ೧೩೩; ಪಂ. ರಾ. I. ೧೬) ಬಾಲಚಂದ್ರನಂತೆಯೇ ಮುನಿರಾಜನೆಂಬ ಬಾಲಚಂದ್ರನೂ ಇದ್ದಾನೆ; ನಾಗಚಂದ್ರನಿಂದ ಸ್ತುತನಾದ ಶುಭಕೀರ್ತಿ (ಪಂ. ರಾ. I. ೨೧-೨೨) ಯ ಸನಾಮನಾದ ಶುಭಕೀರ್ತಿ ಎಂಬೊಬ್ಬನೂ ಇದ್ದಾನೆ. ಈ ಕಾರಣಗಳಿಂದ ನಾಗಚಂದ್ರನ ಗುರುವಾದ ಬಾಲಚಂದ್ರನು ಈತನೇ ಎಂದೂ, ಆತನಿಂದ ಸ್ತುತರಾದ ಮಿಕ್ಕವರಲ್ಲಿ ಮೇಘಚಂದ್ರ ತ್ರೈವಿದ್ಯ, ಶುಭಕೀರ್ತಿ ಮತ್ತು ವೀರಣಂದಿ ಸೈದ್ಧಾಂತಿಕರೆಂಬವರೂ ಈ ಶ್ರ. ಬೆ. 140ನೆಯ ಶಾಸನದಲ್ಲಿ ಹೇಳಲ್ಪಟ್ಟಿರುವ ಇವರೇ ಎಂದು ತೋರುತ್ತದೆ. ಹಾಗಾದರೆ ಶ್ರ. ಬೆ. 158ನೆಯದರಲ್ಲಿ ನಾಗಚಂದ್ರನ 'ಪ್ರಚುರಕಳಾನ್ವಿತರಕುಟಿಳರ್' (ಮಲ್ಲಿ I. ೨೦; ಪಂ. ರಾ. I. ೧೮) ಎಂಬ ಕಂದಪದ್ಯದಿಂದ ಸ್ತುತಿಸಲ್ಪಟ್ಟಿರುವ ಬಾಳಚಂದ್ರನೂ ಶ್ರ. ಬೆ. 140ನೆಯದರಲ್ಲಿ ಶುಭಕೀರ್ತಿಯ ಗುರುವೆಂದು ಹೇಳಲ್ಪಟ್ಟಿರುವ ಬಾಲಚಂದ್ರನೂ ಒಬ್ಬನೇ ಆಗಿರಬೇಕು.

ಶ್ರ. ಬೆ. 140ರಲ್ಲಿ ಈ ಶುಭಕೀರ್ತಿಯನ್ನು 'ಘನದರ್ಪೋನದ್ಧ', 'ವಿತಥೋಕ್ತಿಯಲ್ತು', 'ಸಿಂಗದ ಸರಮಂ' 'ಪೋ ಸಾಲ್ವುದು' ಎಂಬೀ ಯಾವ ಪದ್ಯಗಳಿಂದ ಸ್ತುತಿಸಿದೆಯೋ ಅವೇ ಪದ್ಯಗಳಿಂದ ಶ್ರ. ಬೆ. ನಂ. 72ರಲ್ಲಿಯೂ ಒಬ್ಬ ಶುಭಕೀರ್ತಿಯನ್ನು ಹೊಗಳಿರುವುದರಿಂದ ಅವರಿಬ್ಬರೂ ಒಂದೇ ವ್ಯಕ್ತಿ ಎಂಬಲ್ಲಿ ಸಂಶಯವಿಲ್ಲ. ಶ್ರ. ಬೆ. ನಂ. 72ನೆಯದು ಅಲ್ಲಲ್ಲಿ ಸವೆದು ಹೋಗಿದ್ದು, ಆತನನ್ನು ಕುರಿತು ಅದರಿಂದ ಬೇರಾವ ವಿವರವೂ ತಿಳಿಯದು. ಆದರೆ ಶ್ರ ಬೆ. 69ನೆಯ ಶಾಸನದಲ್ಲಿ ವಕ್ರಗಚ್ಛದ ಬಾಲಚಂದ್ರ ಸೈದ್ಧಾಂತಿಕನ ಸಧರ್ಮನೆಂದು ('ವಕ್ರಗಚ್ಛೇ ಜಾತಸ್ಯ ಭಾವಃ ಶುಭಕೀರ್ತಿ ದೇವಃ')ಹೇಳಲ್ಪಟ್ಟಿರುವ

ಶುಭಕೀರ್ತಿಯಾದರೋ, ನಾಗಚಂದ್ರನ ಗುರು ವಕ್ರಗಚ್ಛದವ ನೆಂದಿಗೂ ಆಗಿರಲಾರನೆಂದು ಈ ಮೇಲೆ ಹೇಳಿರುವ ಕಾರಣದಿಂದ, ಆತನಿಂದ ಪಂಪರಾಮಾಯಣದಲ್ಲಿ ಸ್ತುತಿಸಲ್ಪಟ್ಟ ಶುಭಕೀರ್ತಿಯಾಗಿರ ಲಾರನು.

ಹೀಗೆ ನಾಗಚಂದ್ರನಿಂದ ಸ್ತುತರಾದ ಆ ೮ ಮಂದಿ ಯತಿಗಳಲ್ಲಿ ನಾಲ್ವರ ಹೊಲಬು ದೊರೆತುದರಿಂದ, ಮಿಕ್ಕವರನ್ನು ಕುರಿತು ಏನಾ ದರೂ ಸೋವು ದೊರಕುತ್ತದೋ ನೋಡೋಣ.

(೧) ವರ್ಧಮಾನ (ಮಲ್ಲಿ I. ೧೭–೧೮; ಪಂ. ರಾ. I. ೧೪–೧೫) —ಶ್ರ. ಬೆ. ಸಂ. 71 ನೆಯ ಶಾಸನದಲ್ಲಿ ವರ್ಧಮಾನಮುನೀಂದ್ರನೆಂ ಬೊಬ್ಬನು ನಾಗಚಂದ್ರನ 'ವಿಮಳ ಶ್ರೌತಂ' (ಮಲ್ಲಿ I. ೧೮; ಪಂ. ರಾ. I. ೧೫) ಎಂಬೀ ಕಂದಪದ್ಯದಿಂದಲೇ ಸ್ತುತಿಸಲ್ಪಟ್ಟಿರುವುದರಿಂದ, ನಾಗಚಂದ್ರನಿಂದ ಸ್ತುತನಾದವನು ಈತನೇ ಎಂಬಲ್ಲಿ ಸಂಶಯವಿಲ್ಲ. ಶ್ರ. ಬೆ. ಸಂ. 66ರಿಂದ ನಯಕೀರ್ತಿ ಸಿದ್ಧಾಂತಚಕ್ರವರ್ತಿಯ ಶಿಷ್ಯ ರೆಂದು ಈ ಮೇಲೆ ಕಂಡಿರುವ ಭಾನುಕೀರ್ತಿ ಹಾಗೂ ಆಧ್ಯಾತ್ಮಿ ಬಾಲಚಂದ್ರರೊಂದಿಗೆ ಈ ವರ್ಧಮಾನನು ಶ್ರ. ಬೆ. ಸಂ. 71ರಲ್ಲಿ ಹೇಳ ಲ್ಪಟ್ಟಿರುವುದರಿಂದ ಈತನೂ ಪ್ರಾಯಶಃ ಅವರಂತೆಯೇ ಪುಸ್ತಕಗಚ್ಛ ದವನಾಗಿರಬೇಕು. ಶ್ರ. ಬೆ. ಸಂ. 143ನೆಯ ಶಾಸನದಲ್ಲಿ 'ಶ್ರೀಮೂಲ ಸಂಘದ ದೇಸಿಯಗಣದ ಪೊಸ್ತಕಗಚ್ಛದ ಶ್ರೀಮನ್ಮೇಘಚಂದ್ರ ತ್ರೈವಿದ್ಯದೇವ'ನೆಂದು ಹೇಳಲ್ಪಟ್ಟಿರುವಾತನು ಪ್ರಭಾಚಂದ್ರ ಸಿದ್ಧಾಂತದೇವನ ಗುರುವೆಂದೂ ಅಲ್ಲಿ ಹೇಳಿರುವುದರಿಂದ, ಈ ಮೇಲೆ ಕಂಡಿರುವಂತೆ ಈ ಮೇಘಚಂದ್ರನು ನಾಗಚಂದ್ರನಿಂದ ಸ್ತುತನಾದ ಮೇಘಚಂದ್ರ ತ್ರೈವಿದ್ಯನೆಂದು ಕಂಡಿತವಾಗುವುದರಿಂದ, ಆತನ ಶಿಷ್ಯನಾದ ಆ ಪ್ರಭಾಚಂದ್ರನ ಹಾಗೂ ವರ್ಧಮಾನದೇವರ ಸನ್ನಿಧಿ ಯಲ್ಲಿ ಹೊಯ್ಸಳ ವಿಷ್ಣುವರ್ಧನನ ರಾಣಿಯಾದ ಶಾಂತಲೆಯು ತಾಯಿ

ಮಾಚಿಕಬ್ಬೆ ಸನ್ಯಸನವನ್ನು ಕೈಕೊಂಡು ಮುಡಿಪಿದಳೆಂದು ಹೇಳಿರುವ ಆ ಶಾಸನದಲ್ಲಿಯ ವರ್ಧಮಾನನು ನಾಗಚಂದ್ರನಿಂದ ಸ್ತುತನಾದ ವರ್ಧಮಾನನೇ ವಿನಾ ಬೇರೆಯವನಲ್ಲ. ಹಾಗಾದರೆ ಅದು ಜರುಗಿದ ಶಾ. ಶ. ೧೦೫೩ನೆಯ ವಿರೋಧಿಕೃತ್ ಸಂ। ದಲ್ಲಿ (ಕ್ರಿ. ಶ. 1131) ಈ ವರ್ಧಮಾನನು ಇದ್ದನೆಂದಾಗುತ್ತದೆ. [ಶ್ರ. ಬೆ. 274ರಲ್ಲಿ ಶಾ. ಶ. ೧೨೯೪ನೆಯ ಪರಿಧಾವಿ ಸಂ। ವೈಶಾಖ ಶುಕ್ಲ ೩ ಬುಧವಾರ (ಅಂದರೆ 7ನೆಯ ಏಪ್ರೀಲು 1372)ದಂದು ಇದ್ದನೆಂದಿರುವ ಬಲಾತ್ಕಾರಗಣದ ವರ್ಧಮಾನನೂ ಆತನ ಪರಮಗುರುವೆಂದು ಅಲ್ಲಿಯೇ ಹೇಳಿರುವ ಶುಭಕೀರ್ತಿಯೂ ನಾಗಚಂದ್ರನಿಗಿಂತ ಎಷ್ಟೋ ಈಚೆಯವರೆಂಬುದರಿಂದ ಆತನಿಂದ ಸ್ತುತರಾದವರಲ್ಲವೆಂದು ಬೇರೆ ಹೇಳಬೇಕೆಂದಿಲ್ಲ.]

(೨) ಶ್ರುತಕೀರ್ತಿ ತ್ರೈವಿದ್ಯ (ಪಂ. ರಾ. I. ೨೪–೨೫)—ಶ್ರ. ಬೆ. ಸಂ. 64ರಲ್ಲಿ ಪಂಪರಾಮಾಯಣದ ಇವೇ ಪದ್ಯಗಳಿಂದ ಸ್ತುತಿಸಲ್ಪಟ್ಟಿರುವ ಪುಸ್ತಕಗಚ್ಛದ ಶ್ರುತಕೀರ್ತಿ ತ್ರೈವಿದ್ಯನೆಂಬವನು ನಾಗಚಂದ್ರನಿಂದ ಸ್ತುತನಾದ ಶ್ರುತಕೀರ್ತಿ ತ್ರೈವಿದ್ಯನೇ ಎಂಬಲ್ಲಿ ಸಂಶಯವಿಲ್ಲ. ಅಲ್ಲಿ ಆತನ ಪೀಳಿಗೆ ಹೀಗಿದೆ—




ಹೊಯ್ಸಳ ನರಸಿಂಹನ (1143–1173) ಮಹಾಪ್ರಧಾನನಾದ ಹುಳ್ಳನು ದೇವಕೀರ್ತಿಗೆ ಪರೋಕ್ಷವಿನಯವಾಗಿ ನಿಸದಿಯನ್ನು

ಮಾಡಿಸಿದನೆಂದು ಈ ಶಾಸನದಿಂದ ತಿಳಿಯುವುದರಿಂದ, ದೇವಕೀರ್ತಿ ಕ್ರಿ. ಶ. 1143ರಿಂದ 1173ರೊಳಗೆ ಮೃತವಾಗಿರಬೇಕು, ಶ್ರುತಕೀರ್ತಿ ತ್ರೈವಿದ್ಯನು ಆ ಮುಂಚಿನಿಂದಲೇ ಪ್ರಖ್ಯಾತನಾಗಿರಬೇಕು. ಚಂದ್ರ ಪ್ರಭ ಪುರಾಣವನ್ನು ರಚಿಸಿದ (ಕ್ರಿ. ಶ. 1189) ಅಗ್ಗಳನ ಗುರು ವಾಗಿದ್ದ (I. ೨೪-೨೫; ೫೨) ಶ್ರುತಕೀರ್ತಿ ತ್ರೈವಿದ್ಯನೆಂಬಾತನು ಈತನೇ (ಅನುಬಂಧ III).

(೩) ವಾಸುಪೂಜ್ಯ (ಪಂ. ರಾ. I. ೨೩)-ಶ್ರ. ಬೆ. ಸಂ. 348ನೆಯ ಶಾಸನದ ೨೦ನೆಯ ಓಳಿಯಲ್ಲಿರುವ 'ವಾಸುಪೂ-ಯ-' ಎಂಬುದು 'ವಾಸುಪೂಜ್ಯಯತಿ' ಎಂಬಲ್ಲಿ ಸಂಶಯವಿಲ್ಲ. ಇದು ತೀರ ಸವೆದು ಹೋಗಿದೆಯಾದರೂ ಇದರ ೯ನೆಯ ಓಳಿಯಲ್ಲಿ 'ಅಭಯನಂದಿ'ಯ ಹೆಸರು ಕಾಣುವುದರಿಂದ, ಇದರಲ್ಲಿ ಹೇಳಿರುವ ಪರಂಪರೆ ಪ್ರಾಯಶಃ ಶ್ರ. ಬೆ. 140ರಲ್ಲಿ ಹೇಳಿರುವ (ಹಾಗೂ ಈ ಮೇಲೆ ವಿಸ್ತರಿಸಿರುವ) ಪುಸ್ತಕಗಚ್ಛದ ಅಭಯನಂದಿಯ ಪರಂಪರೆಯೇ ಆಗಿರಬೇಕೆಂದು ಸಾಕಷ್ಟು ದೃಢವಾಗಿ ಹೇಳಬಹುದು. ಹಾಗಾದರೆ ನಾಗಚಂದ್ರ ನಿಂದ ಸ್ತುತನಾಗಿರುವ ವಾಸುಪೂಜ್ಯನು ಅದೇ ಪರಂಪರೆಯವನೆಂದು ಈ ಶ್ರ. ಬೆ. 348ರಿಂದ ತೋರುವ ಈತನಾಗಿರಬೇಕು. [ಅರಸೀಕೆರೆ ಸಂ. 1, ೨೩ ಚನ್ನರಾಯಪಟ್ಣ ಸಂ. 149, ೨೪ ಹಾಗೂ ಕಡೂರು ಸಂ. 69 ೨೫ರಲ್ಲಿ ದ್ರಮಿಳಗಣದ ಶ್ರೀಪಾಲ ತ್ರೈವಿದ್ಯನ ಶಿಷ್ಯನಾ ದೊಬ್ಬ ವಾಸುಪೂಜ್ಯ ಸಿದ್ಧಾಂತದೇವನ ಹೆಸರಿದ್ದು, ಆತನು ಶಾ. ಶ. ೧೦೯೦ನೆಯ ಸರ್ವಧಾರಿ ಸಂ।ದಲ್ಲಿ (ಕ್ರಿ. ಶ. 1168)ಇದ್ದನೆಂದು (ಅರಸೀ ಕೆರೆ ನಂ. 1) ತಿಳಿಯುತ್ತದೆ. ಆದರೆ ಸಿದ್ಧಾಂತದೇವನಾದ ಈ ವಾಸು ಪೂಜ್ಯನು ನಾಗಚಂದ್ರನಿಂದ ಬರೇ ವಾಸುಪೂಜ್ಯಮುನಿಯೆಂದಷ್ಟೇ ಸ್ತುತನಾದ ಏನೂ ಬಿರುದಿಲ್ಲದ ಆ ವಾಸುಪೂಜ್ಯನಾಗಿರಲಾರನು.]

೨೩. E. C. V. ೨೪. Ibid. ೨೫. E. C. VI.

ಇನ್ನು ನಾಗಚಂದ್ರನು ಸ್ತುತಿಸಿರುವೀ ಯತಿಗಳನ್ನು ಕುರಿತು ಶಾಸನಗಳಿಂದ ತಿಳಿಯಬರುವ ಕಾಲಮಾನದಿಂದ ಆತನ ಕಾಲವನ್ನು ನಿರ್ಣಯಿಸುವ. ಶ್ರ. ಬೆ. ನಂ. 127ನೆಯ ಶಾಸನದಿಂದ ಮೇಘ ಚಂದ್ರ ತ್ರೈವಿದ್ಯನು ಶಾ. ಶ. ೧೦೩೭ನೆಯ ಮನ್ಮಥ ಸಂ। ಮಾರ್ಗ ಶಿರ ಶುದ್ಧ ೧೪ ಬೃಹವಾರದಂದು ( 3ನೆಯ ದಶಂಬರ 1115) ದೇವ ಲೋಕಕ್ಕೆ ಸಂದನೆಂದೂ ಆತನ ಶಿಷ್ಯನಾದ ಪ್ರಭಾಚಂದ್ರನು ಆತನಿಗೆ ಪರೋಕ್ಷ ವಿನಯವಾಗಿ ಹೊಯ್ಸಳ ವಿಷ್ಣುವರ್ಧನನ (1106-1141) ದಂಡನಾಯಕನಾದ ಗಂಗರಾಜನ ಹೆಂಡತಿ ಲಕ್ಷ್ಮೀಮತಿ ದಂಡ ನಾಯಕಿತಿ ಮಾಡಿಸಿದ ನಿಸಿಧಿಗೆಯನ್ನು ಪ್ರತಿಷ್ಠಿಸಿದನೆಂದೂ ತಿಳಿಯು ತ್ತದೆ. ಆ ಲಕ್ಷ್ಮೀಮತಿ ದಂಡನಾಯಕಿತಿ ಶಾ. ಶ. ೧೦೪೪ನೆಯ ಪ್ಲವ ಸಂವತ್ಸರದಲ್ಲಿ (ಕ್ರಿ. ಶ. 1121-22) 'ಸಮಾಧಿವೆರಸಿದಳ್' ಎಂದು ಶ್ರ. ಬೆ. 128ನೆಯ ಶಾಸನದಿಂದ ತಿಳಿಯುವುದರಿಂದ, ಆಕೆ ಮೇಘಚಂದ್ರ ತ್ರೈವಿದ್ಯನಿಗೆ ಪರೋಕ್ಷವಿನಯ ಮಾಡಿಸಿದ ನಿಸಿಧಿ ಗೆಯ ಪ್ರತಿಷ್ಠೆ ಕ್ರಿ. ಶ. 1115ರಿಂದ 1120ರೊಳಗೆ ಆಗಿರಬೇಕು; ಅತ ಏವ ಆ ಪ್ರತಿಷ್ಠೆಯನ್ನು ಕುರಿತು ಹೇಳಿರುವ ಶ್ರ. ಬೆ. ನಂ 127ನೆಯ ಶಾಸನವು ಆ ಪ್ರತಿಷ್ಠೆಯ ತರುವಾಯದ ಲೇಖವೂ ಲಕ್ಷ್ಮೀಮತಿ ಸಮಾಧಿ ಹೊಂದುವುದಕ್ಕೆ ಮುಂಚಿನ ಲೇಖನವೂ ಆಗಿದ್ದು ಕ್ರಿ. ಶ. 1120ರಿಂದ ಆಚೆಯದಾಗಿರಬೇಕಲ್ಲದೆ ಈಚೆಯದಾಗಿರಲಾರದು. ಆ ಶಾಸನದಲ್ಲಿ ಮೇಘಚಂದ್ರನನ್ನು ಸ್ತುತಿಸುವೆಡೆಯಲ್ಲಿ ಪಂಪರಾಮಾ ಯಣದ 1. ೨೦ನೆಯ 'ಮುನಿನಾಥಂ ದಶಧರ್ಮಧಾರಿ' ಎಂಬ ಮತ್ತೇಭವಿಕ್ರೀಡಿತವನ್ನೂ ಕೊರೆದಿರುವುದರಿಂದ, ನಾಗಚಂದ್ರನು ಈ ಪದ್ಯವನ್ನು ಬಹುಶಃ ಮೇಘಚಂದ್ರನು ಸಮಾಧಿ ಹೊಂದಿದ ಕ್ರಿ. ಶ. 1115ಕ್ಕೆ ಕೆಲವು ವರ್ಷಗಳ ಮುಂಚೆಯೇ (ಇಲ್ಲವೆ ಅದಾದ ಈಷತ್ಕಾ ಲಾನಂತರ) ರಚಿಸಿದ್ದು, ಅದು ಕೆಲಕಾಲದಿಂದ ಆ ಮೇಘಚಂದ್ರನನ್ನು

ಕುರಿತು ಜೈನರಲ್ಲಿ ತುಂಬ ಸಲುವಳಿಯುಲ್ಲಿದ್ದು ಆ ಕಾರಣದಿಂದ ಆತನನ್ನು ಸ್ತುತಿಸುವ ಈ ಶಾಸನದಲ್ಲಿಯೂ ಉತ್ಕೀರ್ಣವಾಗಿರಬೇಕು ಎಂದು ನಿಷ್ಪನ್ನವಾಗುತ್ತದೆ

ಈಗ 'ಮುನಿನಾಥಂ ದಶಧರ್ಮಧಾರಿ' ಎಂಬೀ ವೃತ್ತವು ಪಂಪ ರಾಮಾಯಣದಲ್ಲಿದೆಯೇ (I. ೨೦) ವಿನಾ ಮಲ್ಲಿನಾಥ ಪುರಾಣದಲ್ಲಿ ಅದೇ ಮೇಘಚಂದ್ರನ ಸ್ತುತಿಯುಲ್ಲಿ ಇಲ್ಲ ಎಂಬುದರಿಂದ, ನಾಗ ಚಂದ್ರನು ಪಂಪರಾಮಾಯಣವನ್ನು ಮುಂಚೆ ರಚಿಸಿದ ಬಳಿಕ ತಾನೆ ಮಲ್ಲಿನಾಥಪುರಾಣವನ್ನು ರಚಿಸಿರಬೇಕೆಂದು ಸಹಜವಾಗಿ ಅನುಮಾನಿಸಲಾಗುತ್ತದಾದರೂ, ಶುಭಕೀರ್ತಿ, ವಾಸುಪೂಜ್ಯ, ಶ್ರುತಕೀರ್ತಿ ತ್ರೈವಿದ್ಯ ಮತ್ತು ವೀರಣಂದಿ ಸೈದ್ಧಾಂತಿಕರೆಂಬೀ ನಾಲ್ವರನ್ನು ಆತನು ತನ್ನ ಮಲ್ಲಿನಾಥ ಪುರಾಣದಲ್ಲಿ ಸ್ತುತಿಸದೆ ಪಂಪರಾಮಾಯಣದಲ್ಲಿ (I ೨೧–೨೭) ಮಾತ್ರ ಸ್ತುತಿಸಿರುವುದರಿಂದ, ಆವೆರಡು ಕಾವ್ಯರಚನೆಗಳ ನಡುಗಾಲದಲ್ಲಿ ತಾನೇ ನಾಗಚಂದ್ರನು ಈ ನಾಲ್ವರೊಂದಿಗೆ ಪರಿಚಿತನಾಗಿ, ಅವರನ್ನು ಮನ್ನಿಸತೊಡಗಿರಬೇಕು,ಅಥವಾ ಆ ನಡುಗಾಲದಲ್ಲಿ ತಾನೇ ಈ ನಾಲ್ವರು ಪ್ರಖ್ಯಾತಿಗೆ ಬಂದಿರಬೇಕು, ಆದುದರಿಂದ ತಾನು ಆ ಬಳಿಕ ರಚಿಸಿದ ಕಾವ್ಯದಲ್ಲಿ ಸಾಹಜಿಕವಾಗಿ ಅವರನ್ನು ಸ್ತುತಿಸಿರಬೇಕು ಎಂದು ಸ್ವತ ಏವ ನಿಷ್ಪನ್ನವಾಗುವುದರಿಂದ, ಆತನು ಮಲ್ಲಿನಾಥಪುರಾಣವನ್ನು ರಚಿಸಿದ ಬಳಿಕ ತಾನೇ ಪಂಪರಾಮಾಯಣವನ್ನು ರಚಿಸಿರಬೇಕು ಎಂದು ಕಂಡಿತವಾಗಿ ನಿರ್ಧರಿಸಬಹುದು. ಆತನ ಪಂಪರಾಮಾಯಣವು ಜೈನರಾಮಾಯಣವೇ ಆದರೂ, ಅದರಲ್ಲಿ ಶ್ರೀರಾಮಚಂದ್ರನನ್ನು ಆತನು ತನ್ನ ಕಥಾನಾಯಕನೆಂಬ ವಿಶೇಷ ಗೌರವದಿಂದೇನೋ 'ರಾಮ **ಜಿನಂ**' (ಪಂ. ರಾ. XVI. ೯೬) ಎಂದಿರುವನಾದರೂ, ಜೈನಧರ್ಮದ ದೃಷ್ಟಿಯಿಂದ ಶ್ರೀರಾಮನು ಆ ಧರ್ಮದ ೯ ಮಂದಿ ಬಲದೇವರಲ್ಲಿ

ಒಬ್ಬನಾಗಿದ್ದು ಆದರ ೬೩ ಮಂದಿ ಶಲಾಕಾಪುರುಷರಲ್ಲಿ ಒಬ್ಬನಾಗಿ ರುವನೇ (ಅಜಿತ.XI. ೨೦ ಗದ್ಯ) ವಿನಾ ಸ್ವಯಂ ಜಿನನಲ್ಲ, ಸ್ವಯಂ ಜಿನರಾದ ಆ ೨೪ ಮಂದಿ ತೀರ್ಥಂಕರರಲ್ಲಿ ಒಬ್ಬನಲ್ಲ ಎಂಬುದರಿಂದ, ನಾಗಚಂದ್ರನು ತನ್ನ ಮಲ್ಲಿನಾಥಪುರಾಣದಲ್ಲಿ (I ೫೦) ತಾನು 'ಜಿನ ಕಥೆಯುಂ ಪೇಳ್ದಿವನೆ' ಎಂದಿರುವಾ ಜಿನಕಥೆ ಶ್ರೀಮಲ್ಲಿನಾಥನಂ ತೆಯೇ ಯಾರೋ ಇನ್ನೊಬ್ಬ ತೀರ್ಥಂಕರನನ್ನು ಕುರಿತುಳ್ಳ ಕವಿತೆ ಯಾಗಿರಬೇಕೇ ಹೊರತು ಅದೆಂದಿಗೂ ಆತನ ಪಂಪರಾಮಾಯಣ ವಾಗಿರಲಾರದು. ಆದಕಾರಣ ತನ್ನ ಮಲ್ಲಿನಾಥಪುರಾಣದಲ್ಲಿ ತಾನು ಜಿನಕಥೆಯನ್ನು ಹೇಳಿರುವಾತನೆಂದಿರುವ ಈತನು ಅದೇ ಬಗೆಯ ಬೇರೆಯೇ ಯಾವುದೊಂದು ತೀರ್ಥಂಕರ ಚರಿತ್ರಾತ್ಮಕವಾದ ಸ್ವಧರ್ಮ ಗ್ರಂಥವನ್ನು ಆ ಮಲ್ಲಿನಾಥ ಪುರಾಣದ ಮುಂಚೆಯೇ ರಚಿಸಿರಬೇಕೆಂದು ವ್ಯಕ್ತವಾಗುವುದರಿಂದ, ಆ ಕಾವ್ಯದಲ್ಲಿ ತನಗೆ ಬಹು ಮಾನ್ಯರಾಗಿರುವ ಜೈನಯತಿಗಳನ್ನು ಸ್ತುತಿಸುವ ಸಂದರ್ಭದಲ್ಲಿ ಈತನು ಮೇಘಚಂದ್ರ ತ್ರೈವಿದ್ಯನನ್ನು 'ಮುನಿನಾಥಂ ದಶಧರ್ಮ ಧಾರಿ' ಎಂಬ ಅದೊಂದೇ ಪದ್ಯದಿಂದ ಸ್ತುತಿಸಿ, ಆ ಬಳಿಕ ರಚಿಸಿದ ತನ್ನ ಮಲ್ಲಿನಾಥ ಪುರಾಣದಲ್ಲಿ ಅದೇ ಯತಿಯನ್ನು 'ಮೂವತ್ತಾಱುಂ ಗುಣದಿಂ' (I. ೨೧) ಎಂಬಾ ಕಂದಪದ್ಯದಿಂದ ಮಾತ್ರ ಸ್ತುತಿಸಿ, ತಾನು ಇನ್ನೂ ಒಳಿಕ ರಚಿಸಿದ ಪಂಪರಾಮಾಯಣದಲ್ಲಿ ಮೇಘ ಚಂದ್ರನನ್ನು ಅವೆರಡೂ ಪದ್ಯಗಳಿಂದ (I. ೧೯–೨೦) ಸ್ತುತಿಸಿರಬೇಕು; ಮತ್ತು ಹೀಗಾದರೆ, ಈತನ ಅನೇಕ ಪದ್ಯಗಳು ಮಲ್ಲಿನಾಥಪುರಾಣ ದಲ್ಲಿಯೂ ಪಂಪರಾಮಾಯಣದಲ್ಲಿಯೂ ಏಕಪ್ರಕಾರವಾಗಿವೆ (ಅನು ಬಂಧ II) ಎಂಬುದರಿಂದ, ಇದೇನೂ ಚೋದ್ಯವೆನಿಸದು. ಅಥವಾ ಇನ್ನೂ ಸಾಕೂತವಾದೊಂದು ಉದಾಹರಣೆಯನ್ನು ಕೊಡುವುದಾ ದರೆ, ನಾಗಚಂದ್ರನು ತನ್ನ ಖಾಸಾ ಗುರುವಾದ ಬಾಲಚಂದ್ರನನ್ನು

ಮಲ್ಲಿನಾಥ ಪುರಾಣದ I ನೆಯ ಆಶ್ವಾಸದಲ್ಲಿ ೨ ಪದ್ಯಗಳಿಂದ (೧೯–೨೦) ಸ್ತುತಿಸಿ, ಆ ಬಳಿಕ ಅದೇ ಕಾವ್ಯದ Xನೆಯ ಆಶ್ವಾಸ ದಲ್ಲಿ ಇನ್ನೊಂದು ಪದ್ಯದಿಂದ (೧೩೩) ಸ್ತುತಿಸಿ, ತನ್ನ ಪಂಪರಾಮಾ ಯಣದ Iನೆಯ ಆಶ್ವಾಸದಲ್ಲಿ ಆತನನ್ನು ಅದೇ ಮೂರು ಪದ್ಯಗಳಿಂದ (೧೬–೧೭–೧೮), ಆ ಪದ್ಯಗಳ ಕ್ರಮವನ್ನು ಮಾತ್ರ ಇಲ್ಲಿ ಪೂರ್ವಾಪರ ಮಾರ್ಪಡಿಸಿ, ಸ್ತುತಿಸಿರುವನೆಂದು ಹೇಳಿದರೆ ಸಾಕು.

ಮೇಘಚಂದ್ರ ತ್ರೈವಿದ್ಯನನ್ನು ಸ್ವೀಯಗುರುಭಾವದಿಂದ ಸ್ತುತಿಸಿರುವ ನಾಗಚಂದ್ರನು ಆತನನ್ನು ಕಂಡು ಬಲ್ಲವನಾಗಿರಬೇ ಕೆಂಬುದರಿಂದ, ಕ್ರಿ. ಶ. 1115ರಲ್ಲಿ ಮೇಘಚಂದ್ರನು ಮೃತವಾದಾಗ ಈತನಿಗೆ ೨೫ರಷ್ಟಾದರೂ ವಯಸ್ಸಿರಬೇಕು, ಅಂದರೆ ನಾಗಚಂದ್ರನು ಕ್ರಿ. ಶ. ಸು. 1090ರಲ್ಲಿ ಹುಟ್ಟಿರಬೇಕೆನ್ನಬಹುದು. ಹಾಗಾದರೆ ತಾನು 'ಜಿನಕಥೆಯಂ ಪೇಳ್ದಪನೆ' ಎಂದಿರುವ ತನ್ನ ಪ್ರಾಯಶಃ ಪ್ರಥಮ ಕೃತಿಯಾದ ಆ ತೀರ್ಥಂಕರ ಚರಿತ್ರವನ್ನು ಈತನು ಕ್ರಿ. ಶ. ಸು. 1110–1115ರೊಳಗೆ ರಚಿಸಿರಬಹುದು. ಕ್ರಿ. ಶ. ಸು. 1110–1120ರೊಳಗಣದೆಂದು ಈ ಮೇಲೆ ನಿರ್ಧರಿಸಿರುವ ಆ ಬಿಜಾಪುರದ ಶಿಲಾಲೇಖವು ಹುಟ್ಟುವಂದು ನಾಗಚಂದ್ರನಿಗೆ ಸುಮಾರು ೨೦–೩೦ ರಷ್ಟು ಪ್ರಾಯವಾಗುವುದರಿಂದ ಈತನೇ ಅದರ ರಚಕನಾಗಿರಬೇ ಕೆಂದು ಸಾಕಷ್ಟು ಧೈರ್ಯದಿಂದ ಹೇಳಬಹುದು; ಅದನ್ನೀತನು ಕ್ರಿ. ಶ. 1115-1120ರೊಳಗೆ ರಚಿಸಿರಬಹುದು. ಮೇಘಚಂದ್ರ ತ್ರೈವಿ ದ್ಯನ ಹಿರಿಯ ಶಿಷ್ಯನಾದ ಪ್ರಭಾಚಂದ್ರನು ಶಾ. ಶ. ೧೦೬೮ನೆಯ ಕ್ರೋಧನ ಸಂ। ಆಶ್ವಯುಜ ಶುಕ್ಲ ೧೦ ಬೃಹವಾರದಂದು (27ನೆಯ ಸಪ್ಟಂಬರ 1145) ಸ್ವರ್ಗತನಾದನೆಂದು ತಿಳಿಸುವ ಶ್ರ. ಬೆ. 140ನೆಯ ಶಾಸನದಲ್ಲಿ ಮೇಘಚಂದ್ರನನ್ನು ಸ್ತುತಿಸುವೆಡೆಯಲ್ಲಿ ಪಂಪರಾಮಾ ಯಣದಲ್ಲಿ ಆತನನ್ನು ಸ್ತುತಿಸಿರುವ ಅವೆರಡೂ (I. ೧೯–೨೦)

ಪದ್ಯಗಳಿನೆ ಮಾತ್ರವಲ್ಲ, ಮಲ್ಲಿನಾಥ ಪುರಾಣದಲ್ಲಿ ಹೆಸರಿಸಲ್ಪಟ್ಟಿಲ್ಲದ ವೀರಣನಂದಿ ಸೈದ್ಧಾಂತಿಕನನ್ನು ಪಂಪರಾಮಾಯಣದಲ್ಲಿ (I. ೨೬–೨೭) ಸ್ತುತಿಸಿರುವ ಅವೇ ೨ ಕಂದಪದ್ಯಗಳಿಂದ ಈ ಶಾಸನದಲ್ಲಿಯೂ ಸ್ತುತಿಸಿದೆ ಎಂಬುದರಿಂದ ನಾಗಚಂದ್ರನು ತನ್ನ ಪಂಪರಾಮಾಯಣ ವನ್ನು ಕ್ರಿ. ಶ. 1145ಕ್ಕೆ ಕೆಲವು ವರ್ಷಗಳ ಹಿಂದೆಯೇ, ಅಂದರೆ ಕ್ರಿ. ಶ. ಸು. 1140ರಲ್ಲಿ ರಚಿಸಿರಬೇಕೆಂದು ನಿಶ್ಚಯಿಸಬಹುದು. ಹಾಗಾದರೆ ಮಲ್ಲಿನಾಥ ಪುರಾಣವನ್ನು ಆತನು ಕ್ರಿ. ಶ. ಸು. 1115 (ಅಥವಾ 1120) ರಿಂದ 1140ರೊಳಗೆ ರಚಿಸಿರಬೇಕು.

ನಾಗಚಂದ್ರನು ತಾನು 'ಜನಪತಿ[೨೬] ಸಭೆಯೊಳ್ ಪೂಜ್ಯಂ' (ಮಲ್ಲಿ I. ೪೧) ಎಂದೂ 'ಚತುರ ಕವಿಜನಾಸ್ಥಾನ ರತ್ನಪ್ರದೀಪ' ನೆಂದೂ (ಮಲ್ಲಿ I ೪೩; III. ೧೨೫; IV. ೧೫೨; V. ೧೦೫) ಇಷ್ಟು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಆತನ 'ನರೇಂದ್ರ ಚೂಡಾರತ್ನ' (ಮಲ್ಲಿ. IV ೧; VIII. ೪; ಪಂ. ರಾ. XII. ೫, ೧೩) ಎಂಬ ಬಿರು ದಿನಿಂದ ರನ್ನನ ಗದಾಯುದ್ಧದ (I. ೪೧) 'ವಸುಧಾಪತಿಯ ಕಟಕ ದೊಳ್' ಎಂಬ ಕಂದಪದ್ಯದಿಂದ ಮೂಡುವಂತೆ ರಾಜಮಾನ್ಯನೆಂಬ ಅರ್ಥವೇ ಮೂಡುವುದರಿಂದಲೂ, ಆತನೊಬ್ಬ ಆಸ್ಥಾನಕವಿಯಾಗಿರಬೇ ಕೆಂಬಲ್ಲಿ ಸಂಶಯವಿಲ್ಲ. ಮಲ್ಲಿನಾಥ ಪುರಾಣದ ವಸ್ತುವನ್ನು ಕುರಿತು

---

೨೬ ಮಲ್ಲಿನಾಥ ಪುರಾಣದಲ್ಲಿ (ಕರ್ಣಾಟಕ ಕಾವ್ಯಮಂಜರಿಯ ಆವೃತ್ತಿ 1895) ಈ ಪದ್ಯದ ಮೊತ್ತಮೊದಲಿನ ನುಡಿ 'ಜಿನಪತಿ' ಎಂದಿದೆ. ಜಿನಪತಿ ಎಂದರೆ ಜೈನ ತೀರ್ಥಂಕರರು, ಜಿನಪತಿ ಸಭೆ ಎಂದರೆ ಆ ೨೪ ಮಂದಿ ತೀರ್ಥಂಕರರ ಕೈವಲ್ಯಸಭೆ; ಅಲ್ಲಿ ನಾಗಚಂದ್ರನು ಪೂಜ್ಯನಾಗಿದ್ದನೆಂದರೆ ಅರ್ಥವಿಲ್ಲ ಎಂಬುದ ರಿಂದ ಆ ಪಾಠವು ತೀರ ತಪ್ಪೆಂದು ಬೇರೆ ಹೇಳಬೇಕೆಂದಿಲ್ಲ. ಆದಕಾರಣ ಅದು 'ಜನಪತಿ ಸಭೆ' ಎಂದೇ ಆಗಿರಬೇಕೆಂದು ತೋರುವುದರಿಂದ ನಾನದನ್ನು ಹೀಗೆ ತಿದ್ದಿಕೊಂಡಿರುತ್ತೇನೆ.

'ಕಿಱಿದೀ ಕಥಾ ಪರಿಸ್ಪಂದ'ವೆಂದೂ, 'ಕೃತಿ ಸಾಧಾರಣಮಾದೊಡ' ಮೆಂದೂ (I. ೪೫-೪೬) ತಾನೇ ಹೇಳಿ, ಅದರಲ್ಲಿರುವ ಇನ್ನೂ ಕಿರಿದಾದ ಆ ವೈಶ್ರವಣನ ಕಥೆಯನ್ನು ಈತನು ೯-೧೦ ಆಶ್ವಾಸಗಳಷ್ಟಕ್ಕೆ ಎಳೆದನೇಕೆ ಎಂದು ಸೂಕ್ಷ್ಮವಾಗಿ ವಿಚಾರಿಸಿದರೆ, ತನಗೆ ಪೂಜ್ಯನಾಗಿರುವ ಯಾವನೊಬ್ಬ ಅರಸನನ್ನು ಕುರಿತು ಆ ಕಥೆಯಲ್ಲಿ (ಪಂಪ-ರನ್ನರಂತೆ ವ್ಯಕ್ತವಾಗಿ ಅಲ್ಲವಾದರೂ) ಪ್ರತ್ಯೇಕ ಎಡೆಯಲ್ಲಿ ಅಲ್ಲವಾದರೂ ಅಲ್ಲಲ್ಲಿ ಒಂದೊಂದು ಪದ್ಯದಲ್ಲಿ ಅಥವಾ ಒಂದೊಂದು ಸಾಕೂತವಾದ ಸೂಚನೆಯಿಂದ ವ್ಯಂಗ್ಯವಾಗಿ ಸೂಚಿಸಿರುವಂತೆ ತೋರುತ್ತದೆ. ಅದು ಹೇಗೆಂದರೆ—

(೧) ವೈಶ್ರವಣನ ಮೂಲಕಥೆಯಲ್ಲಿ ಇರಬಹುದಾದ ನಾಗಭಟ್ಟಾರಕನೆಂಬವನಲ್ಲಿ ತನ್ನ ಖಾಸಾ ಗುರುವಾದ ಬಾಲಚಂದ್ರಯತಿಯನ್ನು ಆರೋಪಿಸಿ,[೨೭] ಆ 'ಬಾಳಚಂದ್ರಾಪರ ನಾಮಧೇಯನಪ್ಪ ಶ್ರೀನಾಗಭಟ್ಟಾರಕ'ರಿಂದ–(ಮಲ್ಲಿ. X. ೧೨೮.) ವೈಶ್ರವಣನು ದೀಕ್ಷೆ ಹೊಂದಿದನೆಂದು ಹೇಳಿರುವುದರಿಂದ, ಅದೇ ಮೇರೆಗೆ ಆ ವೈಶ್ರವಣನಲ್ಲಿ ತನ್ನ ಪೋಷಕನಾದ ಅರಸನನ್ನು ಆರೋಪಿಸಿರಬೇಕೆಂಬುದೂ ಸಹಜವೆನಿಸುತ್ತದೆ. ಇದರಿಂದ ಆತನ ಪೋಷಕನಾದ ಅರಸನು ಜೈನನಾಗಿರಬೇಕೆಂದೂ ಇಲ್ಲ, ಬಾಲಚಂದ್ರನಿಂದ ದೀಕ್ಷೆ ಪಡೆದಿರಬೇಕೆಂದೂ ಇಲ್ಲ; ಪಂಪನು ತನ್ನ ಕಥಾನಾಯಕನಾದ ವಿಕ್ರಮಾರ್ಜುನನಿಗೆ ಹಸ್ತಿನಾವತಿಯಲ್ಲಿ ಜರುಗಿದ ಪಟ್ಟಾಭಿಷೇಕಕ್ಕೆ ತನ್ನ ಜನ್ಮಭೂಮಿಯಾದ ಬನವಾಸಿಯಲ್ಲಿಯ 'ವರದಾ (ನದಿಯ) ಪುಣ್ಯಾಂಬು'ವನ್ನು (ಪಂ. ಭಾ. XIV. ೩೧) ಹೊರಿಸಿ ತಂದಂತೆ, ತನ್ನ ಗುರುವಾದ

೨೭ ಪಂಪರಾಮಾಯಣದಲ್ಲಿಯೂ (VI. ೨೭) ಈ ಕವಿ ತನ್ನ ಗುರುವಾದ ಬಾಲಚಂದ್ರನನ್ನು ಸರ್ವಭೂತಹಿತ ಭಟ್ಟಾರಕನೆಂಬ (ತನ್ನ) ಕಥಾವ್ಯಕ್ತಿಯಾದೊಬ್ಬ ಜೈನಯತಿಯಲ್ಲಿ ಆರೋಪಿಸಿರುತ್ತಾನೆ.

ಬಾಲಚಂದ್ರನಲ್ಲಿಯೂ ತನ್ನ ಪೋಷಕನಾದ ಅರಸನಲ್ಲಿಯೂ ತನಗಿರುವ ಗೌರವ ಮಮತೆಗಳಿಂದ ತಾನೇ ಈ ಕವಿ ಅವರಿಬ್ಬರನ್ನೂ ಒಡವೆರಸಿ ಆ ಮಟ್ಟಿಗೆ ಅವರನ್ನು ತನ್ನ ಕಥಾವ್ಯಕ್ತಿಗಳೊಂದಿಗೆ ಸಮಾಕರಿಸಿರ ಬೇಕೇ ವಿನಾ ಆ ಹೋಲಿಕೆ ಪ್ರತ್ಯೇಕ ವಿಷಯದಲ್ಲಿ ವಾಸ್ತವಿಕವಾಗಿರ ಬೇಕೆಂದಿಲ್ಲ.

(೨) ಈ ಜೈನಪುರಾಣದ ಉಪನಾಯಕನಾದ ಆ ವೈಶ್ರವಣ ನನ್ನು ಈ ಕವಿ 'ಷೋಡಶರಾಜರೊಳ್ಳೊರೆಗೆ ವಂದಂ' (ಮಲ್ಲಿ. III ೧೮) ಎಂದಿರುವಲ್ಲಿ ಷೋಡಶರಾಜರೆಂದರೆ ವೈದಿಕಧರ್ಮದ ಪುರಾಣ ಗಳಲ್ಲಿ ಪ್ರಸಿದ್ಧರಾಗಿರುವ ಷೋಡಶ ಚಕ್ರವರ್ತಿಗಳಲ್ಲದೆ ಜೈನಪುರಾಣ ಗಳಲ್ಲಿ ಹೇಳಿರುವ ಭರತ-ಸಗರಾದಿ (ಅಜಿತ, XI ೨೦ ಗದ್ಯ) ಜೈನರ ದ್ವಾದಶಚಕ್ರವರ್ತಿಗಳಲ್ಲ ಎಂಬುದರಿಂದ, ನಾಗಚಂದ್ರನಿಂದ ವ್ಯಂಗ್ಯ ವಾಗಿ ಸೂಚಿಸಲ್ಪಟ್ಟಿರಬಹುದಾದ ಆತನ ಪೋಷಕನಾದ ಅರಸನು ಧರ್ಮದಿಂದ ಸ್ವಯಂ ಜೈನನಾಗಿರದೆ ವೈದಿಕಧರ್ಮದ ಅನುಯಾಯಿ ಯಾಗಿರಬೇಕೆಂಬುದು ಬಲವತ್ತರವೆನಿಸುತ್ತದೆ.

(೩) ಆ ವೈಶ್ರವಣನನ್ನು ಕುರಿತು (III ೫೧)

'ಧರಣೀನಾಥ ನವಕ್ರವಿಕ್ರಮಧನಂ ಭೂಚಕ್ರಮಂ ತಾಳ್ದಿದಂ॥' ಎಂದಿರುವಲ್ಲಿ ಈ ಮೇಲಣ ಬಿಜಾಪುರದ ಶಾಸನದಲ್ಲಿ ಹೇಳಿರುವ 'ಚಾಳುಕ್ಯ ಚಕ್ರೇಶ್ವರ' (ಪದ್ಯ ೩) ನಾದ 'ವಿಕ್ರಮಾಭರಣ' (ಪ. ೨) ನೆಂಬ ತ್ರಿಭುವನಮಲ್ಲ ವಿಕ್ರಮಾದಿತ್ಯನ ಪೆಸರು ಧ್ವನಿಸು ವಂತೆ ತೋರುತ್ತದೆ.

(೪) ವೈಶ್ರವಣನ 'ಅಗ್ರಮಹಿಷಿ' (ಮಲ್ಲಿ III ೫೩) 'ಲಕ್ಷ್ಮೀ ಮಹಾದೇವಿ' (III ೫೨, ೫೫, ೫೬) ಎಂಬಲ್ಲಿ ತ್ರಿಭುವನಮಲ್ಲ ವಿಕ್ರ ಮಾದಿತ್ಯನ 'ಪಿರಿಯರಸಿ' ಯಾದ 'ಲಕ್ಷ್ಮೀ ಮಹಾದೇವಿ' ಯ ೨೮ ಹೆಸರು ಧ್ವನಿಸದಿರದು.

೨೮ A. R. S. I. E, 1928 (App. E. ನಂ. 74. ಪು. 25)

(೫) ಮಲ್ಲಿನಾಥ ಪುರಾಣದಲ್ಲಿರುವ ( V ೬ )
'ಪ್ರಚಂಡ ವಿಕ್ರಮಧನರಾತ್ತ ಬಾಂಧವ–ಪರಾಭವ–ಭಾರಮನೇಕೆ–
ಸೈರಿಪರ್'

ಎಂಬಲ್ಲಿ ಶ್ಲೇಷೆ ಇರುವಂತೆ ತೋರುತ್ತದೆ. ಸೂರ್ಯನ ಪರವಾಗಿ ಪ್ರಚಂಡ ವಿಕ್ರಮಧನರಾಗಿರುವವರು ತಮ್ಮ ಬಾಂಧವರಿಗೆ ಉಂಟಾದ ಪರಾಭವದ ಭಾರವನ್ನು ಸೈರಿಸಲಾರರು ಎಂಬಂತೆಯೇ, ತನ್ನ ಅಣ್ಣನಾದ II ಸೋಮೇಶ್ವರನಿಂದ ತನಗಾದ ಅಪಮಾನವನ್ನು ಸೈರಿಸಲಾರದೆ ಆತನನ್ನು ಗೆದ್ದು ತಾನು ಅರಸಾದ, ಆ ಬಳಿಕ ತನ್ನ ಕೆಯ್ಕೆಳಗೆ ಬನವಾಸಿಯ ಆಧಿಪತ್ಯದಲ್ಲಿ ಮಹಾಮಂಡಳೇಶ್ವರನಾಗಿದ್ದ ತನ್ನ ತಮ್ಮನಾದ ಜಯಸಿಂಹನು ತನಗೆ ವಿರೋಧವಾಗಿ ಎದ್ದಾಗ ಆತನನ್ನೂ ಗೆದ್ದ ಚಾಳುಕ್ಯ ವಿಕ್ರಮಾದಿತ್ಯನ ಪರವಾಗಿ ಪ್ರಚಂಡನಾದ ವಿಕ್ರಮಾದಿತ್ಯನಂಥವರು ತಮಗೆ ತಮ್ಮ ಬಾಂಧವರಿಂದ ( ಲಾದರೂ ) ಉಂಟಾದ ಪರಾಭವದ ಭಾರವನ್ನು ಸೈರಿಸಲಾರರೆಂದೂ ಸುಲಭವಾಗಿ ಅರ್ಥವಾಗುತ್ತದೆ.

(೬) ವೈಶ್ರವಣನನ್ನು 'ರಾಜ ಸರ್ವಜ್ಞ' ( ಮಲ್ಲಿ III ೨೧; VII ೧೦೭; IX ೨೧; X ೧೦೧ ) ಎಂದದೆಯಷ್ಟೇ. ಪಂಪನು ತನ್ನ ಪೋಷಕನಾದ ಚಾಳುಕ್ಯ ಅರಿಕೇಸರಿಯನ್ನು 'ಸರ್ವಜ್ಞ ಭೂಪತಿ' ಎಂದೂ ( ಪಂ. ಭಾ. XIV ౩೨ ), ಜನ್ನನು ತನ್ನ ಪೋಷಕನಾದ ಹೊಯ್ಸಳ ವೀರನರಸಿಂಹನನ್ನು 'ಸರ್ವಜ್ಞ ಭೂಪ' ನೆಂದೂ ( ಅನಂತ I. ೫೬ ) ಹೇಳಿರುವುದನ್ನು ನೆನವಿಗೆ ತಂದುಕೊಂಡರೆ, ನಾಗಚಂದ್ರನು ಅದೇ ಬಿರುದಿಂದ ವರ್ಣಿಸಿರುವಾತನು ಆತನ ಕಥಾನಾಯಕನಾದ ವೈಶ್ರವಣನೇ ಅಲ್ಲ, ಆ ವೈಶ್ರವಣನಲ್ಲಿ ಆರೋಪಿಸಲ್ಪಟ್ಟಿರುವ ತನ್ನ ಪೋಷಕನಾದ ಅರಸನನ್ನು ಆತನು ವ್ಯಂಗ್ಯವಾಗಿಯಾದರೂ ಹೀಗೆಂದು ಪೊಗಳಿರಬೇಕೆಂದು ಹೊಳೆಯದಿರದು. ಅದ

ಲ್ಲದೆ ವಿಕ್ರಮಾದಿತ್ಯನ ಮಗನೂ ಉತ್ತರಾಧಿಕಾರಿಯೂ ಆಗಿದ್ದ ಭೂಲೋಕಮಲ್ಲ III ಸೋಮೇಶ್ವರನಿಗೆ (1126–1138) 'ಸರ್ವಜ್ಞ, ಚಕ್ರವರ್ತಿ,' ೨೯ 'ಸರ್ವಜ್ಞ ಮಹೀಭೃತ್' ೩೦ ಎಂಬ ಬಿರುದು ಇದ್ದುದರಿಂದ, ಅದನ್ನೇ ತನ್ನ ಕಥಾನಾಯಕನಾದ ವೈಶ್ರವಣನಲ್ಲಿ ತಾನು ಆರೋಪಿಸಿರುವ ಆತನ ತಂದೆಯಾದ ವಿಕ್ರಮಾದಿತ್ಯನಿಗೆ ಈ ಕವಿ ಹೇಳಿರಲೂಬಹುದು, ಅಥವಾ ಆತನನ್ನು ತಂದೆಗಿಂತ 'ಮಿಗಿಲೀ ತನೀ ತನಯು' (ಮಲ್ಲಿ ix. ೧೦೦) ನೆನಿಸಬೇಕಾದರೆ ಸರ್ವಜ್ಞ ಚಕ್ರವರ್ತಿಯ ತಂದೆಯನ್ನು ರಾಜಸರ್ವಜ್ಞನೆಂದು ನಾಗಚಂದ್ರನು ಸಮಯೋಚಿತವಾಗಿ ಹೇಳಿರಲೂಬಹುದು.

(೭) ಮಲ್ಲಿನಾಥ ಪುರಾಣದಲ್ಲಿಯ ಗ್ರಂಥಾವತಾರದ ಜಿನ ಸ್ತುತಿಯುಳ್ಳ ಸ್ರಗ್ಧರೆಯಲ್ಲಿ ಶ್ರೀ ಮಲ್ಲಿನಾಥ ತೀರ್ಥಂಕರನನ್ನೆಂತೋ ಅಂತೆಯೇ ತನ್ನ ಗುರುವಾದ ಬಾಲಚಂದ್ರನನ್ನೂ ಈ ಕವಿ ಸ್ತುತಿಸಿರುತ್ತಾನೆಂಬುದು ಪ್ರತ್ಯಕ್ಷವಾಗಿದೆ. ಹಾಗೆಯೇ ಅದರಲ್ಲಿ ಚಾಳುಕ್ಯ ಚಕ್ರವರ್ತಿಯಾದ ಭೂಲೋಕಮಲ್ಲ III ಸೋಮೇಶ್ವರನನ್ನು ವ್ಯಂಗ್ಯವಾಗಿಯೇ ಆದರೂ ಸೂಚಿಸುವ ಅರ್ಥವೂ ಧ್ವನಿಸುವಂತಿದೆ; ಹೇಗೆಂದರೆ– (ಕ) ಬಾಲಚಂದ್ರೋಜ್ಜ್ವಲತೆಯಲ್ಲಿ ಸೋಮೇಶ್ವರನೆಂಬ ಹೆಸರಲ್ಲಿರುವ (ಬಾಲ) ಚಂದ್ರಮೌಲಿತ್ವವು ದ್ಯೋತಕವಾಗಿದೆ; (ಖ) ಅನೇಕ ಮಂಡಳೇಶ್ವರರಿಂದಲೂ ಅನೇಕಾನೇಕ ಸಾಮಂತರಿಂದಲೂ ಪ್ರಣತನಾದ ಚಾಳುಕ್ಯ ಚಕ್ರವರ್ತಿಯ 'ಪಾದಪೀಠಂ ಭೂಪಾಲೋತ್ತಂಸ ತಾರಾತರಳ ಮಣಿಗಳಿಂ'ದ ಅಲಂಕೃತವಾಗಿದ್ದಿತೆಂಬುದು ಯಥಾರ್ಥವೇ; (ಗ) 'ಉತ್ತಮಾಂಗಂ ಶರಜ್ಜ್ಯೋತ್ಸ್ನಾ ಪಾಂಡು

29 Ibid: Supplement 1927 (App. F. ನಂ. 62. ಪು. 5)
30 'ತತ್ಸುತನಖಿಳಕಳಾ ಸಂಪತ್ಸಂನಿಧಿ ಪನ್ನೊಳೆಸೆಯೆ ಸರ್ವಜ್ಞ ಮಹೀಭೃತ್ ಸಂಜ್ಞೆವಡೆದನ್' (ದಾವಣಗೆರೆ ನಂ. 41. E. C. XI.)

ಚ್ಛತ್ರ ರತ್ನಗಳಿಂ' ದ ಅಲಂಕೃತವಾಗಿದೆ ಎಂಬುದೂ ಚಾಳುಕ್ಯ ಚಕ್ರವರ್ತಿಗೆ ನೇರಾಗಿ ಅನ್ವಯಿಸತಕ್ಕುದೇ; (ಘ) ಆತನು 'ದಿವ್ಯ ಭಾಷಾ ವ್ಯಾಪಾರೋದಾರನಾದಂ' ಎಂದೂ ಇದೆಯುಷ್ಟೇ. ದಿವ್ಯ ಭಾಷೆ ಎಂದರೆ ಸಂಸ್ಕೃತ ಭಾಷೆ ಎಂದು ಮಲ್ಲಿನಾಥ ಪುರಾಣದಿಂದಲೇ(XIV. ೨೯ಳ) ತಿಳಿಯುತ್ತದೆ. III ಸೋಮೇಶ್ವರನು ಸಂಸ್ಕೃತದಲ್ಲಿ 'ಮಾನಸೋಲ್ಲಾಸ' ಅಥವಾ 'ಅಭಿಲಾಷಿತಾರ್ಥ ಚಿಂತಾಮಣಿ' ಎಂಬ ೩೧ ವಿವಿಧ ಸಂಗ್ರಹ ಉಳ್ಳ ಗ್ರಂಥವನ್ನು ರಚಿಸಿರುತ್ತಾನೆ. ಏವಂಚ ಈ ಬಗೆಯ ಹೋಲಿಕೆ ಅಲ್ಲೊಂದು ಇಲ್ಲೊಂದು ಮಾತಿಂದ ಸೂಚಿತವಾಗಿದೆಯೇ ವಿನಾ ತುದಿಯಿಂದ ತುದಿವರೆಗೆ ಸರ್ವಾಂಗೀನವಲ್ಲಎಂಬುದಕ್ಕೆ ವೈಶ್ರುವಣನನ್ನು ಅಲ್ಲಲ್ಲಿ (ಮಲ್ಲಿ VIII ೧೩೯; IX. ೯೨,೧೧೩) 'ಮಹಾ ಮಂಡಳೇಶ್ವರ' ನೆಂದು ಹೇಳಿದೆ ಎಂಬ ಇದೊಂದು ದೃಷ್ಟಾಂತವೇ ಸಾಕು; ಏಕೆಂದರೆ ಆತನಲ್ಲಿ ಒಂದೊಂದು ಮಾತಿಂದ ವ್ಯಂಗ್ಯವಾಗಿಯಾದರೂ ಸೂಚಿಸಲ್ಪಟ್ಟಿರುವ ತ್ರಿಭುವನಮಲ್ಲ ವಿಕ್ರಮಾದಿತ್ಯನಾದರೊ ಎಷ್ಟೋ ಮಂದಿ ಮಹಾ ಮಂಡಳೇಶ್ವರರು ತನ್ನ ಕೆಯ್ಕೆಳಗಿದ್ದ ಸಮಗ್ರ ಕರ್ಣಾಟಕ ಸಾಮ್ರಾಜ್ಯದ ಚಕ್ರವರ್ತಿಯಾಗಿದ್ದನಲ್ಲದೆ ತಾನೊಬ್ಬ ಮಹಾಮಂಡಳೇಶ್ವರನಾಗಿರಲಿಲ್ಲವಷ್ಟೇ.

ಹಾಗಾದರೆ ನಾಗಚಂದ್ರನು ಮಲ್ಲಿನಾಥಪುರಾಣದ ಅಪೂರ್ವ ಕಥೆಯ ನಾಯಕನಾದ ವೈಶ್ರುವಣನಲ್ಲಿ ವಿಕ್ರಮಾದಿತ್ಯನನ್ನು ಸೂಚಿಸಿ, ಆತನ ಮಗನಾದ ಶ್ರೀಧರನು ಪಟ್ಟವೇರಿದನೆಂದೂ, ಗ್ರಂಥಾರಂಭದ ವೃತ್ತದಲ್ಲಿ III ಸೋಮೇಶ್ವರನನ್ನು ಸೂಚಿಸಿ ಆತನು 'ದಿವ್ಯ ಭಾಷಾ ವ್ಯಾಪಾರೋದಾರನಾದ'ನೆಂದೂ ಹೇಳಿರುವುದರಿಂದ, ಆ

೩೧ 'ಚಾಲುಕ್ಯವಂಶತಿಲಕಃ ಶ್ರೀ ಸೋಮೇಶ್ವರ ಭೂಪತಿಃ । ಕುರುತೇ ಮಾನಸೋಲ್ಲಾಸಂ ಶಾಸ್ತ್ರಂ ವಿಶ್ವೋಪಕಾರಕಮ್॥' (ಅಭಿಲಾಷಿತಾರ್ಥ ಚಿಂತಾಮಣಿ. I. ೨೦- Mysore University Sanskrit Series ನಂ. 69)

III ಸೋಮೇಶ್ವರನು ಕ್ರಿ. ಶ. 1126ರಲ್ಲಿ ಪಟ್ಟಕ್ಕೆ ಬಂದು ಶಾ. ಶ. ೧೦೫೧ನೆಯ ಸೌಮ್ಯ ಸಂವತ್ಸರದಲ್ಲಿ (ಕ್ರಿ. ಶ. 1129) ತನ್ನ 'ಅಭಿಲಾಷಿತಾರ್ಥ ಚಿಂತಾಮಣಿ'ಯನ್ನು ರಚಿಸುತ್ತಿರುವಂದು.[೩೨] ಈತನ ಮಲ್ಲಿನಾಥ ಪುರಾಣವು ರಚಿಸಲ್ಪಟ್ಟಿರಬೇಕು, ಅಂದರೆ ಮಲ್ಲಿನಾಥ ಪುರಾಣದ ರಚನೆ ಕ್ರಿ. ಶ. 1130 ರೊಳಗೆ ಆಗಿರಬೇಕೆನ್ನಬಹುದು. ಹೀಗೆಂದರೆ ಕ್ರಿ. ಶ. ಸು. 1090 ರಲ್ಲಿ ಹುಟ್ಟಿದ ನಾಗಚಂದ್ರನಿಗೆ ಮಲ್ಲಿನಾಥ ಪುರಾಣವನ್ನು ರಚಿಸುವಂದು ೪೦ ರಷ್ಟು. ಆ ಬಳಿಕ ಕ್ರಿ. ಶ. 1140 ರಲ್ಲಿ ಪಂಪ ರಾಮಾಯಣವನ್ನು ರಚಿಸುವಾಗ ೫೦ ರಷ್ಟು ವಯಸ್ಸಾಗುತ್ತದೆ.

ಇನ್ನು ನಾಗಚಂದ್ರನ ಜನ್ಮಭೂಮಿ ಯಾವುದಾಗಿರಬಹುದೆಂದು ವಿಚಾರಿಸುವ. (೧) ಈತನ ಮಲ್ಲಿನಾಥ ಪುರಾಣದಲ್ಲಿ (I. ೩೮) ರೂಪಕೋಕ್ತಿಯಿಂದ ಹೇಳಿರುವ ಬಹಿತ್ರಯಾತ್ರೆ ಎಂಬುದು ತಕ್ಕಷ್ಟು ದೀರ್ಘವಾದ ಸಂಯಾತ್ರೆ (ಅತಏವ ಸಮುದ್ರಯಾತ್ರೆ) ಯಾಗಿರಬೇಕಲ್ಲದೆ ಒಂದೆರಡು ತಾಸುಗಳಲ್ಲಿ ಹೊಳೆಯನ್ನು ಆಚೀಚೆ ಹಾದು ಹೋಗುವ ತೆಪ್ಪದ ಅಲ್ಲವೆ ಓಡದ ಪಯಣವಲ್ಲವೆಂದು ಅದೇ ಪದ್ಯದಿಂದ ವ್ಯಕ್ತವಾಗುವುದರಿಂದ, ಈ ಕವಿ ತಾನೇ ಹಡಗದಲ್ಲಿ ಕಡಲನ್ನು ದಾಂಟಿಲ್ಲವಾದರೆ 'ಪಯೋಧಿವೇಲೆ' (I. ೩೮) ಯಲ್ಲಿದ್ದ ಹಡಗುಗಳ ಪ್ರಯಾಣವನ್ನು ಸ್ವತಃ ಕಂಡಾದರೂ ಬಲ್ಲವನಾಗಿರಬೇಕು; (೨) ಈತನ ಪಂಪರಾಮಾಯಣದಲ್ಲಿರುವ ದಕ್ಷಿಣ ಸಮುದ್ರದ ವರ್ಣನಾವಸರದಲ್ಲಿ 'ತೆರೆ ತೆರೆಯನಟ್ಟಿದುವು ಬೆಟ್ಟದ ಬೆಂಬಳಿಯಂ ಬೆಟ್ಟಟ್ಟುವವೋಲ್' (XII. ೯೦) ಎಂದಿರುವೀ ಉಪಮೆ ಧನುಷ್ಕೋಟಿಯ ಬಳಿಯಲ್ಲಿ ಗುಜ್ಜಾದ ತೆರೆಗಳುಳ್ಳ ಆ ದಕ್ಷಿಣ ಸಮುದ್ರಕ್ಕೆ ಎಂದಿಗೂ ನೇರಾಗಿಲ್ಲದಿರುವುದರಿಂದ, ಈತನು ದಕ್ಷಿಣ

೩೨ Ibid. I. 2 (೬೨–೬೫)

ಸಮುದ್ರವನ್ನು ಪ್ರತ್ಯಕ್ಷವಾಗಿ ಕಂಡಿರಲಾರನು ಎಂದಾಗುವಂತೆಯೇ, ಈತನು ಪೂರ್ವಸಮುದ್ರವನ್ನೋ ಪಶ್ಚಿಮಸಮುದ್ರವನ್ನೋ ಕಂಡಿದ್ದು ದಕ್ಷಿಣ ಸಮುದ್ರವೂ ಹಾಗೆಯೇ ಇರಬೇಕೆಂಬ ಭಾವನೆಯಿಂದ ತಾನೆ ಹೀಗೆಂದಿರಬೇಕು ಎಂದು ಹೇಳಬಹುದು; (೩) ಮಲ್ಲಿನಾಥ ಪುರಾಣದಲ್ಲಿಯೂ (VIII. ೭೬–೧೦೮) ಪಂಪರಾಮಾಯಣದಲ್ಲಿಯೂ (VII ೧೩೯–೧೬೯) ಏಕ ಪ್ರಕಾರವಾಗಿರುವ ಆ ವರ್ಷಾಕಾಲದ ವರ್ಣನೆಯಲ್ಲಿ '**ಪಡುವಣ ಕಡಲಿಂ**ದೊಗೆದುದು........ **ನೀ**ರಂಧ್ರ **ನೀ**ಲ **ನೀ**ರದ **ನಿ**ವಹಂ' (ಮಲ್ಲಿ VIII ೮೩; ಪಂ. ರಾ. VII. ೧೪೩) ಎಂದಿರುವೀತನು ಆ ಪ್ರಾಕೃತಿಕ ದರ್ಶನವನ್ನು ಕಣ್ಣಾರೆ ಕಂಡಿರಬೇಕೆಂದು ಆಗುವಂತೆಯೇ, ಅದನ್ನು ಮಳೆಗಾಲದಲ್ಲಿ ತಾನೆ ಕಂಡಿರಬೇಕೆಂದೂ ಆಗುವುದರಿಂದ, ಈತನು ಕಡಲಿಂದ ದೂರವಾಗಿರುವ ಒಳನಾಡಿನ ಯಾವುದೊಂದು ಊರಿನವನಾಗಿದ್ದು ಯಾರಾದರೂ ತಂತಮ್ಮ ಮನೆ ಬಿಟ್ಟು ಊರು ಬಿಟ್ಟು ಹೊರಕ್ಕೆ ಏಸುಕಾತ ಲೊಲ್ಲದ ಮಳೆಗಾಲದಲ್ಲಿ ಅಲ್ಲಿಂದ ಪಡುಗಡಲಿನ ತೀರದವರೆಗೆ ಹೋಗಿ ಅಲ್ಲಿ ಆ ಕಡಲಿಂದ ಒಗೆತರುವ ಮುಗಿಲ ಗಡಣವನ್ನು ನೋಡಿ ಹೀಗೆ ಬರೆದಿರಬಹುದೇನೋ ಎಂಬುದಕ್ಕಿಂತ, ಈತನು ಪಶ್ಚಿಮ ಸಮುದ್ರದ ಕರಾವಳಿಯಲ್ಲಿಯೇ ಇರುವ ಯಾವುದೊಂದು ಊರಿನಲ್ಲಿ ಹುಟ್ಟಿ ಬೆಳೆದಿದ್ದು ಚಿಕ್ಕಂದಿನಿಂದಲೇ ವರ್ಷೇ ವರ್ಷೇ ತಾನು ಕಂಡು ಬಲ್ಲ ಸಲುಗೆಯಿಂದ ತಾನೆ ಈ ದೃಶ್ಯವನ್ನು ಯಥಾವತ್ತಾಗಿ ಹೀಗೆಂದಿರಬೇಕು ಎಂಬುದು ಬಲವತ್ತರವೆನಿಸುತ್ತದೆ. ಹಾಗಾದರೆ ಈತನು ಬಹುಶಃ ಬನವಾಸಿಯ ಸೀಮೆಯವನಾಗಿರಬೇಕು. ಪಂಪ ಭಾರತದಲ್ಲಿರುವ ವರ್ಷಾ ಕಾಲದ ವರ್ಣನೆಯಲ್ಲಿ (VII. **೨೨–೨೫** ಗದ್ಯ) ಕೂಡ ಇಲ್ಲದಷ್ಟು ಸ್ಫುರದ್ರೂಪವಾದ ಯಥಾರ್ಥತೆಯಿಂದ ಪ್ರಕೃತಿಯನ್ನು ಬಣ್ಣಿಸಿರುವೀತನು ಆ 'ಆದಿ' ಪಂಪನಂತೆ ಪಡುಗಡಲಿಂದ

ಸಾಂಕಷ್ಟು ಒಳಗಡೆಯಲ್ಲಿರುವ ಬನವಾಸಿ ಪಟ್ಟಣದವನೇ ಆಗಿರದೆ, ಪನ್ನಿಚ್ಛಾಸಿರವೆಂಬಾ ಬನವಾಸಿ ದೇಶದ ಪಡುಗಡಿಯು ಕಡಲದಂಡೆ ಯಲ್ಲಿ ತಾನೆ ಇರುವ ಯಾವೊಂದು ಊರಿನವನಾಗಿರಬೇಕು.

ನಿರಾಧಾರವಾಗಿ ಯಾವುದೊಂದು ಜನಶ್ರುತಿ ಹುಟ್ಟದೆಂದಾದರೆ ನಾಗಚಂದ್ರನು ತನ್ನ ಎಳೆ ವಯಸ್ಸಿನಲ್ಲಿಯೇ ಆಗ್ಗೆ ಚಾಳುಕ್ಯ ಚಕ್ರ ವರ್ತಿಯ ಮಹಾ ಮಂಡಳೇಶ್ವರನಾಗಿದ್ದ ಹೊಯ್ಸಳ ವಿಷ್ಣುವರ್ಧ ನನ ರಾಜಧಾನಿಯಾಗಿದ್ದ ದ್ವಾರಸಮುದ್ರಕ್ಕೆ ಹೋಗಿ, ಅಲ್ಲಿ ಕೆಲಕಾಲ ನೆಲಸಿರುವಂದು ತಾನೆ ಆತನಿಗೂ ಅಲ್ಲಿಯ ಕಬ್ಬಿಗಿತಿಯಾದ ಕಂತಿಗೂ ಆದವೆಂದಿರುವ ಸಮಸ್ಯೆಗಳು ೩೩ ನಡೆದಿರಬೇಕು. ತಾನು 'ಜಿನ ಕಥೆಯುಂ ಪೇಳ್ದಿವನೆ' (ಮಲ್ಲಿ I. ೫೦) ಎಂದಿರುವ ತನ್ನ ಪ್ರಥಮ ಕೃತಿ ಯನ್ನು ಈತನು ಬಹುಶಃ ವಿಷ್ಣುವರ್ಧನನ ಆಸ್ಥಾನದಲ್ಲಿರುವಾಗಲೇ ಕ್ರಿ. ಶ. 1110-1115 ರೊಳಗೆ ರಚಿಸಿರಬಹುದು.

ಈತನ ಪೂರ್ವಿಕನಾದ ರನ್ನನು (ಗದಾ. I. ೩೪) ಮೊದಲಲ್ಲಿ ಸಾಮಂತರನ್ನು ಆ ಬಳಿಕ ಮಹಾಮಂಡಳೇಶ್ವರರನ್ನು ಸೇರಿ ಕಟ್ಟ ಕಡೆಗೆ ಚಾಳುಕ್ಯ ಚಕ್ರವರ್ತಿಯ ಆಸ್ಥಾನವನ್ನು ಸೇರಿದಂತೆ, ಈತನೂ ವಿಷ್ಣುವರ್ಧನನ ಆಸ್ಥಾನದಿಂದ ಹೊರಟು ಬಿಜಾಪುರಕ್ಕೆ ಹೋಗಿ ಅಲ್ಲಿ ಚಾಳುಕ್ಯ ಯುವರಾಜನಾದ ಮಲ್ಲಿಕಾರ್ಜುನನ ಆಸ್ಥಾನವನ್ನು ಸೇರಿ ಬಿಜಾಪುರದ ಆ ಶಿಲಾಲೇಖವನ್ನು ಅಲ್ಲಿರುವಂದು ಕ್ರಿ. ಶ. ಸು. 1120 ರಲ್ಲಿ ರಚಿಸಿರಬಹುದು. ಈತನು '**ಮಲ್ಲಿ**ದೇವ' (ಬಿಜಾಪುರದ ಶಿಲಾಲೇಖ-ಪದ್ಯ ೬) ನೆಂದಿರುವ ಆ ಮಲ್ಲಿಕಾರ್ಜುನನ೩೪ ಪ್ರೋತ್ಸಾಹ ಅಥವಾ ಸಹಾಯದಿಂದ ತಾನೆ ಈತನು ಆ 'ವಿಜಯಪುರ'ವೆಂಬ ಬಿಜಾಪುರದಲ್ಲಿ ಆ '**ಮಲ್ಲಿ**ದೇವ'ನ ಸನಾಮನಾದ '**ಮಲ್ಲಿ**

---

೩೩. ಕರ್ಣಾಟಕ ಕವಿಚರಿತೆ I (ಪು. 110-112). ೩೪. '**ಮಲ್ಲಿ**ದೇವ ಮಹಿಮಾಸ್ಪದಮಂ' (ಜಯಕರ್ಣಾಟಕ VIII. ೩. ಪು. ೧೪೮)

ಜಿನೇಂದ್ರ' ನಿಗೆ (ಮಲ್ಲಿ XVI.೫೭) ಗೇಹವನ್ನು ಮಾಡಿಸಿ,ಬಹುಶಃ ಆ ಸನಾಮಿಕೆಯನ್ನೇ ಉದ್ದೇಶಿಸಿ ತನ್ನ **ಮಲ್ಲಿ**ನಾಥ ಪುರಾಣವನ್ನೂ ರಚಿಸತೊಡಗಿರಬಹುದೇನೋ. ಆದರೆ ಬಹುಶಃ ಅದು ಕೊನೆ ಸಾಗುವ ಮುಂಚೆಯೇ ಯುವರಾಜನಾದ ಮಲ್ಲಿಕಾರ್ಜುನನು ಮೃತವಾದುದ ರಿಂದೇನೋ ಈತನು ಆ ಬಳಿಕ ಆತನ ತಮ್ಮನಾದ III ಸೋಮೇಶ್ವ ರನ ಆಸ್ಥಾನವನ್ನು ಸೇರಿ ಅಲ್ಲಿ ಆ ಗ್ರಂಥವನ್ನು ಮುಗಿಸಿರಬೇಕು.

## ಅನುಬಂಧ I

ಮದ್ರಾಸು ವಿಶ್ವವಿದ್ಯಾಲಯದ ಅಧ್ಯಾಪಕರಾಗಿರುವ ಶ್ರೀಮಾನ್ ಎಚ್. ಶೇಷಯ್ಯಂಗಾರರವರು ಬಿಹಾರ ಪ್ರಾಂತದ ಆರಾ ಎಂಬಲ್ಲಿಯ ಜೈನಸಿದ್ಧಾಂತಭವನದಿಂದ ತರಿಸಿಕೊಂಡ ದುರ್ಗಸಿಂಹನ 'ಪಂಚತಂತ್ರ'ದ ಹಸ್ತಪತ್ರಿಕೆಯ ಕೊನೆಯಲ್ಲಿ ಇದೊಂದು ಮತ್ತೇಭವಿಕ್ರೀಡಿತವದೆ—

ಅತಿ ಸಂಪನ್ನತೆವೆತ್ತ ಸದ್ಗ್ರುಹ (ಸದ್ಗುಣ?) ನಿವಾಸಸ್ಥಾನವೋದ
(ಮಾದ?) ಪ್ರಜಾ
ಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷದ್ವಾದಶೀ ತಾರಕಾ।
ಪತಿವಾರಂ ಬರೆ ಪಂಚತಂತ್ರಮೆಸದತ್ತೀ ಧಾತ್ರಿಯೊಳ್ ದುರ್ಗನಿ
ರ್ಮಿತ ಮುದ್ಯತ್ಕರಿಸೆ............ಮದಲೀಲಾ ಪುಷ್ಪಿತಾಂಬ್ರ
(ತಾಮ್ರ?) ದ್ರುಮಂ॥

ದುರ್ಗಸಿಂಹನು ತನ್ನ ಈ ಕಾವ್ಯವನ್ನು 'ಚಾಳುಕ್ಯರಾಜಾನ್ವಯ'ದ (ಪಂಚ I. ೩೧) 'ಶ್ರೀಕೀರ್ತಿವಿದ್ಯಾಧರ' ನೆಂಬ ಬಿರುದುಳ್ಳ 'ಜಗದೇಕಮಲ್ಲ' (I. ೩೦) 'ಜಯಸಿಂಹ'ನ (I. ೩೨) ಆಳಿಕೆಯಲ್ಲಿ (1018-1042) ರಚಿಸಿದನೆಂದು ಅದರಿಂದಲೇ ತಿಳಿಯುವುದರಿಂದ, ಈ ಮೇಲಣ ವೃತ್ತದಲ್ಲಿ ಹೇಳಿರುವ ಪ್ರಜಾಪತಿ ಸಂವತ್ಸರವು ಶಾ. ಶ. ೯೫೩ನೆಯದು, ಆತಏವ ಈ ಕಾವ್ಯವನ್ನಾತನು ರಚಿಸಿ ಮುಗಿಸಿದ

ತೇದಿ ಶಾ. ಶ. ೯೫೩ನೆಯ ಪ್ರಜಾಪತಿ ಸಂ। ಚೈತ್ರ ಶುಕ್ಲ ೧೨ ಸೋಮವಾರ, ಅಂದರೆ ಕ್ರಿ. ಶ 1031 ನೆಯ ಮಾರ್ಚಿ 8 ನೆಯ ತಾರೀಕು ಬಂದಾಗುತ್ತದೆ.

ಆದುದರಿಂದ ಈ ಪಂಚತಂತ್ರದಲ್ಲಿ 'ಮಾರ್ಗದ್ವಯಪರಿಣತ ಕವಿಮಾರ್ಗಮನೋಹಾರಿ ಗೀರ್ಗುಂಫ' ( I. ೨೫ ) ಉಕ್ತವನೆಂದಿರುವ ಪಂಪನು 'ದೇಸಿಯೆಂಬುದನೆನೆ ವಸ್ತುವಿದ್ಯೆಯನೆ.... ಸಮಸ್ತ ಭಾರತಮುಮಾದಿಪುರಾಣ ಮಹಾ ಪ್ರಬಂಧಮುಂ' ಹೇಳಿದೆನೆಂದು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ( XIV. ೫೯) ಹೇಳಿಕೊಂಡಿರುವ 'ಆದಿ' ಪಂಪನೇ ವಿನಾ ಅಭಿನವಪಂಪನೆಂಬ ನಾಗಚಂದ್ರನಲ್ಲವೆಂದೂ, ಆ ಪಂಚತಂತ್ರದಲ್ಲಿ ( I. ೨೨ ) 'ಮಾಳವೀ ಮಾಧವಮುಂ ವಿರಚಿಸಿದ ಕನ್ನಮಯ್ಯಂ' ಎಂದಿರುವಾತನು ಬಹುಶಃ 'ಆದಿ' ಪಂಪನಿಗಿಂತ ಹಿಂದಣವನಾಗಿದ್ದ ಕನ್ನಮಯ್ಯನೆಂಬೊಬ್ಬ ಪ್ರಾಯಶಃ ನಾಟಕ ರಚಕನಾದ ಕವಿಯಾಗಿರಬೇಕೇ ಹೊರತು ನೇಮಿನಾಥ ಪುರಾಣವನ್ನು ರಚಿಸಿದ ಕರ್ಣಪಾರ್ಯನೆಂದಿಗೂ ಅಲ್ಲವೆಂದೂ ನಿಸ್ಸಂದೇಹವಾಗಿ ದೃಢವಾಗುತ್ತದೆ.

## ಅನುಬಂಧ II

ನಾಗಚಂದ್ರನ ಮಲ್ಲಿನಾಥ ಪುರಾಣದಲ್ಲಿಯೂ ಪಂಪರಾಮಾಯಣದಲ್ಲಿಯೂ ಅವೇ ಅವೇ ಹಲವು ಪದ್ಯಗಳಿವೆಯಷ್ಟೇ, ಅಂಥವನ್ನು ಇಲ್ಲಿ ಸೂಚಿಸಿಯದೆ; ಇವಲ್ಲದೆ ಇನ್ನೂ ಕೆಲವು ಇರಬಹುದೇನೋ.

| ಮಲ್ಲಿನಾಥ ಪುರಾಣ | ಪಂಪರಾಮಾಯಣ |
|---|---|
| I. ೧೦-೧೧-೧೨-೧೩-೧೪-೧೫-೧೬-೧೭-೧೮-೧೯ | I. ೭-೮-೯-೧೦-೧೧-೧೨ ೧೩ ೧೪-೧೫-೧೬. |
| X. ೧೩೩ | I. ೧೭. |
| I. ೨೦-೨೧ | I. ೧೮-೧೯. |

II ೭೩-೭೭-೭೮-೭೯
IV ೧೦೨-೧೦೬-೧೦೭ ೧೦೮-೧೦೯-೧೧೦
VIII. ೭೬-೭೭-೭೮
VIII. ೮೨-೮೩-೮೪-೮೫-೮೬-೮೮-೮೯-೯೦-೯೧-೯೨-೯೪-೯೫-೯೬-೯೭-೯೮-೯೯-೧೦೦-೧೦೧-೧೦೩-೧೦೪-೧೦೫-೧೦೬-೧೦೭-೧೦೮
X ೫೨-೫೫-೧
X. ೧೨೯
X. ೧೨೦-೧೨೧-೧೨೨-೧೨೩-೧೨೪-೧೨೫-೧೨೬-೧೨೭
X ೧೩೦
XI ೧೩-೫೪
XII. ೧೦೬

I. ೧೨೮-೧೨೭-೧೨೬-೧೨೯.
III. ೧೦೨-೧೦೪-೧೦೪-೧೦೬-೧೦೭-೧೦೮.
VII. ೧೩೯-೧೪೦-೧೪೧.
VII. ೧೪೨-೧೪೩-೧೪೪-೧೪೫-೧೪೬-೧೪೭-೧೪೮-೧೪೯-೧೫೦-೧೫೧ ೧೫೨-೧೫೩-೧೫೪-೧೫೫-೧೫೬-೧೫೭-೧೫೮-೧೫೯-೧೬೪-೧೬೫-೧೬೬-೧೬೭-೧೬೮-೧೬೯-
VII. ೧೧೩-೧೧೪.
VI. ೨೮; xvl. ೩೭.
VII. ೪೦-೪೧-೪೨-೪೩-೪೪-೪೫-೪೬-೪೭.
VI ೨೯.
XVI. ೫೯-೬೧.
I. ೧೨೫

## ಅನುಬಂಧ III

ಈ ಮೇಲೆ ಹೇಳಿರುವಂತೆ ಶ್ರ. ಬೆ. ಸಂ. 64ನೆಯ ಶಾಸನದಲ್ಲಿ ಹೇಳಿರುವ ಪುಸ್ತಕಗಚ್ಛದ ಪೀಳಿಗೆ ಹೀಗದೆ—

ಕುಲಚಂದ್ರ
|
ಮಾಘನಂದಿ ಸೈದ್ಧಾಂತಿಕ
|
ಗಂಡವಿಮುಕ್ತ — ಶ್ರುತಕೀರ್ತಿತ್ರೈವಿದ್ಯ

ಗಂಡವಿಮುಕ್ತ
|
ಭಾನುಕೀರ್ತಿ — ದೇವಕೀರ್ತಿ

ಈ ಶಾಸನದಲ್ಲಿ ಶ್ರುತಕೀರ್ತಿತ್ರೈವಿದ್ಯನ ಅಗ್ರಜನು ಕನಕನಂದಿ ಎಂದೂ, ಆತನ ಸಧರ್ಮನು ಮಾಘನಂದಿತ್ರೈವಿದ್ಯನೆಂದೂ ಇನ್ನೂ ಇವೆರಡು ಹೆಸರುಗಳಿವೆ. ಅಗ್ಗಳನ ಚಂದ್ರಪ್ರಭಪುರಾಣದಲ್ಲಿ ಸ್ತುತಿಸಲ್ಪಟ್ಟಿರುವ ಪುಸ್ತಕ ಗಚ್ಛದ (ಚಂದ್ರ I. ೫೩) ಕುಲಚಂದ್ರನೂ (I. ೨೧), ಮಾಘಣಂದಿ ಸೈದ್ಧಾಂತಿಕ ಚಕ್ರವರ್ತಿಯೂ (I. ೨೨), ಕನಕನಂದಿಯೂ (I. ೨೩), ಶ್ರುತಕೀರ್ತಿ ತ್ರೈವಿದ್ಯನೂ (I. ೨೪, ೨೫, ೫೨), ತ್ರೈವಿದ್ಯೇಶನಾದ ಮಾಘಣಂದಿಯೂ (I. ೩೧) ಈ ಪೀಳಿಗೆಯಲ್ಲಿ ಹೇಳಲ್ಪಟ್ಟವರೆ ವಿನಾ ಇತರರಲ್ಲ. ಈ ಶ್ರುತಕೀರ್ತಿ ತ್ರೈವಿದ್ಯನು ಕ್ರಿ. ಶ. ಸು. 1140ಕ್ಕೆ ಮುಂಚೆಯೇ ಪ್ರಖ್ಯಾತನಾಗಿರಬೇಕೆಂದು ಈ ಮೇಲೆ ಕಂಡಿರುವುದರಿಂದ, ನಾಗಚಂದ್ರನಿಂದಲೂ ಸ್ತುತನಾದ ಈತನು ಹೆಚ್ಚುಕಡಿಮೆ ನಾಗಚಂದ್ರನ ಸಮ ವಯಸ್ಕನಾಗಿದ್ದು, ತನ್ನ ವಾರ್ಧಕ್ಯದಲ್ಲಿ ಅಗ್ಗಳನಿಗೂ ಗುರುವಾಗಿರಬೇಕು; ಅಂದರೆ ಅಗ್ಗಳನು ಚಂದ್ರಪ್ರಭ ಪುರಾಣವನ್ನು ರಚಿಸಿದ (*X*VI. ೮೭) ಶಾ. ಶ. ೧೧೧೧ ನೆಯ ಸೌಮ್ಯ ಸಂ। ದಲ್ಲಿ (ಕ್ರಿ. ಶ. 1189) ಈತನಿದ್ದನೆಂದಾದರೆ, ಈತನು ಆಗ್ಗೆ ಸುಮಾರು ೯೦–೯೫ ವರ್ಷದ ಮುದುಕನಾಗಿರಬೇಕು.

ಶ್ರ. ಬೆ. ನಂ. 69ನೆಯ ಶಾಸನದಲ್ಲಿ ಬಾಳಚಂದ್ರ ಮುನಿಪಃ ಸಿದ್ಧಾಂತ ಚಕ್ರಾಧಿಪಃ' ಎಂದೊಮ್ಮೆ ಹೇಳಿ ಅದೇ ವ್ಯಕ್ತಿಯನ್ನು ಪುನಃ 'ರಾದ್ಧಾಂತೋತ್ತಮ ಬಾಳಚಂದ್ರ ಮುನಿಯುಂ' ಎಂದಿರುವುದರಿಂದ, ಜೈನ ಪರಿಭಾಷೆಯಲ್ಲಿ ರಾದ್ಧಾಂತವೆಂದರೂ ಸಿದ್ಧಾಂತವೆಂವೆಂದರೂ ಒಂದೇ ಎಂದು ತಿಳಿಯುವುದರಿಂದ, ಅಗ್ಗಳನು ರಾದ್ಧಾಂತ ಚಕ್ರಾಧೀಶ'ನೆಂದು (ಚಂದ್ರ. I. ೨೯) ಸ್ತುತಿಸಿರುವ ವೀರನಂದಿಯೂ ಪಂಪರಾಮಾಯಣದಲ್ಲಿ (I. ೨೬–೨೭) ನಾಗಚಂದ್ರನಿಂದ ಸ್ತುತನಾದ ವೀರಣಂದಿ ಸೈದ್ಧಾಂತಿಕನೂ ಒಬ್ಬನೇ ಎಂಬಲ್ಲಿ ಸಂಶಯವಿಲ್ಲ.

ಹೀಗೆ ನಾಗಚಂದ್ರನಿಂದ ಸ್ತುತಿಸಲ್ಪಟ್ಟ ಶ್ರುತಕೀರ್ತಿ ತ್ರೈವಿದ್ಯನನ್ನೂ ವೀರಣಂದಿ ಸೈದ್ಧಾಂತಿಕನನ್ನೂ ಅಗ್ಗಳನೂ ಸ್ತುತಿಸಿರುವುದರಿಂದ, ನಾಗಚಂದ್ರನು ಅವರನ್ನು ಅವರ ಯೌವನದಲ್ಲಿ ಕಂಡು ಬಲ್ಲವನಾಗಿದ್ದರೆ ಅಗ್ಗಳನು ಅವರನ್ನು ಅವರ ವಾರ್ಧಕ್ಯದಲ್ಲಿ ಕಂಡು ಬಲ್ಲವನಾಗಿರಬೇಕೆಂದು ಸಹಜವಾಗಿ ಸಿದ್ಧವಾಗುತ್ತದೆ. ಅತ ಏವ ಅಗ್ಗಳನು ಕನ್ನಡ ಜೈನ ಪುರಾಣಕಾರರಾದ ತನ್ನ ಪೂರ್ವಕವಿಗಳನ್ನು ಸ್ತುತಿಸುವೆಡೆಯಲ್ಲಿ (ಚಂದ್ರ. I. ೬೬) ಪಂಪ–ಪೊನ್ನ–ರನ್ನರನ್ನು ಹೆಸರಿಸಿರುವಂತೆ ನಾಗಚಂದ್ರನನ್ನು ಹೆಸರಿಸಲಿಲ್ಲವೆಂಬುದಕ್ಕೆ ನಾಗಚಂದ್ರನು ಅಗ್ಗಳನಿಗೆ ಅದ್ಯತನನಾಗಿದ್ದನೆಂಬುದೇ ಕಾರಣವಾಗಿರಬೇಕು. ಆದರೆ ನಾಗಚಂದ್ರನ ಕಾವ್ಯಗಳನ್ನು, ಮುಖ್ಯತಃ ಆತನ ಮಲ್ಲಿನಾಥಪುರಾಣವನ್ನು ಅಗ್ಗಳನು ಕಂಡುಬಲ್ಲವನಾಗಿದ್ದನೆಂಬುದಕ್ಕೆ ಅದರಲ್ಲಿಯ (ಮಲ್ಲಿ. I. ೫೦) 'ರಾಜವಿಟ ಚೋರ ಕಥೆ' ಎಂಬ ಮಾತೇ ಚಂದ್ರಪ್ರಭಪುರಾಣದಲ್ಲಿಯೂ (I. ೫೦) ಧ್ವನಿಸುತ್ತದೆಂಬ ನಿದರ್ಶನವೇ ಸಾಕು.

---

# ನಾಗಚಂದ್ರನ ಮಲ್ಲಿನಾಥ ಪುರಾಣ

( ದ. ರಾ. ಬೇಂದ್ರೆ )

ಅದ್ಭುತಸನಾಗಿಯುಂ ನೆಗ– ।
ಳ್ದುದ್ಧುರ ದೊರೆಯೆನಿಸಿ ಮೆರೆದು ಸಾಹಿತ್ಯಕಳಾ ॥
ಹೃದ್ಯತೆಯಿನೆಸೆದನಾನಿರ– ।
ವದ್ಯಗುಣಂ ಸಂದ**ನಾಗಚಂದ್ರಕವೀಂದ್ರಂ** ॥

—ಕರ್ಣಪಾರ್ಯ.

## ೧ ಕವಿಯ ಚಾರಿತ್ರ್ಯ ಮತ್ತು ಕಾವ್ಯಸಂಭವ

ಪ್ರತಿಯೊಂದು ಕೃತಿಗೂ ಅದರದರ ಸಂದರ್ಭಾನುಸಾರವಾಗಿ ವಿಶೇಷಾರ್ಥವು ಒದಗುವದುಂಟು. ಸಾಹಿತ್ಯಕೃತಿಗೂ ಈ ನಿಯಮವು ಅನ್ವಯಿಸುವದು. ಅಂತೆಯೆ ಈಗಿನ ವಿಮರ್ಶೆಯಲ್ಲಿ ಕವಿಚರಿತೆಗೆ ಹೆಚ್ಚು ಮಹತ್ತ್ವವಿದೆ. ಪೂರ್ವದಲ್ಲಿಯೂ ಈ ಮಹತ್ತ್ವವಿತ್ತು; ಆದರೆ ಸಾಂಪ್ರದಾಯಕ್ಕೂ ಸಮಯಕ್ಕೂ ಚಾರಿತ್ರ್ಯಕ್ಕಿಂತಲೂ ಹೆಚ್ಚು ಬೆಲೆಯಿತ್ತು. ಇಷ್ಟೆ ಅಲ್ಲ, ಸಾಂಪ್ರದಾಯಸಮಯಶರಣತೆಯ ಸಂಸ್ಕಾರದ ಫಲವೆಂದೆ ವ್ಯಾವಹಾರಿಕ ಚಾರಿತ್ರ್ಯವನ್ನೂ ಸಾಹಿತ್ಯ ಕೃತಿಯನ್ನೂ ಕಾಣುತ್ತಿದ್ದರು. ಆದರೆ ಈಗಿನ ವಿಚಾರದಲ್ಲಿ ಸಾಂಪ್ರದಾಯಸಮಯಸಮೂಹವೆಲ್ಲ ಒಂದು ಜಡ ಯಂತ್ರ ಮಾತ್ರ; ಕವಿಚೈತನ್ಯವು ಅದನ್ನು ನಿರ್ವಹಿಸುವ ಯಾಂತ್ರಿಕನು. ರತ್ನತ್ರಯ ತತ್ತ್ವವಾದರೂ ಇದನ್ನೇ ಸಾರುತ್ತದೆ. ದರ್ಶನವು ಮೊದಲಾದರೂ ಜ್ಞಾನವು ಮೇಲು; ಜ್ಞಾನವು ಮೂಲಭೂತವಾದರೂ ಚಾರಿತ್ರ್ಯದಿಂದಲೆ ಅದರ ಸಫಲತೆಯು.

ಹೀಗೆ ಚಾರಿತ್ರ್ಯವು ಪೋಲಾದರೂ ನಮ್ಮ ಪೂರ್ವ ಕವಿಗಳ ಚರಿತ್ರಾಂಶಗಳು ದುರ್ಲಭವಾಗಿವೆ. ಅವರ ಸಾಹಿತ್ಯಕೃತಿಗಳೆ ಅವರ ಚಾರಿತ್ರ್ಯದ ಅಮೃತ ಫಲಗಳಂತೆ ಇಂದಿಗೂ ಬಾಳಿವೆ. ಉಳಿದುದೆಲ್ಲವೂ ತಾತ್ಕಾಲಿಕ, ನಶ್ವರ ಎಂಬಂತೆ ಹೇಳಹೆಸರಿಲ್ಲದಾಗಿದೆ. ಆದರೆ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು, ಮಹಾತ್ಮನಾಗಿ ಆಚಾರ್ಯ ಪದವಿಯನ್ನೇರುವನು. ಆದರೆ ನುಡಿವಳಿಕೆಯು ಮೃಗಜಲದಂತೆ ಬೆರಗುಗೊಳಿಸುವದಾಗಿ ನಡೆವಳಿಕೆಯು ತೃಪ್ತಿಯಾಗದ ಮೃಗವು ಬೆಂಬತ್ತಿದಂತಿದ್ದರೆ ಆ ಮನುಷ್ಯನು 'ಕವಿ' ಜಾತಿಗೆ ಸೇರುವನು. ಹೀಗೆಂದಷ್ಟಕ್ಕೆ ಕವಿಗಳು ಚಾರಿತ್ರ್ಯವಂತರಾಗಲಾರರೆಂದಲ್ಲ; ಚಾರಿತ್ರ್ಯವಂತರು ಕವಿಗಳಿರಲಾರರೆಂದಲ್ಲ. ಏನಿದ್ದರೂ ಚಾರಿತ್ರ್ಯವೆ ವಸ್ತುವು; ಕಾವ್ಯವು ಛಾಯೆ; ಅದೇ ಅರ್ಥ ಇದು ಪದ; ಅದು ನಾಯಕ ಇದು ಕವಿ; ಅದು ದೇವ ಇದು ಋಷಿ; ಅದು ಕಾವ್ಯ ಇದು ವಿಮರ್ಶೆ; ಅದು ರಸ ಇದು ಭಾವ. ಕೃತಿರತ್ನಕ್ಕೆ ಚಾರಿತ್ರ್ಯದ ಕುಂದಣ ಬೇಕು. ಆದರೆ ಲೇಸನ್ನು ಮಾಡುವವನಷ್ಟೆ ಅಲ್ಲದಿದ್ದರೂ ತದನಂತರದ ತರಗತಿಯಲ್ಲಿ ಆ ಲೇಸನ್ನು ಕಂಡು ಉಜ್ವಲವಾಗಿ ಕೀರ್ತಿಸುವವನ ಸ್ಥಾನವಿದೆ. ಆ ಲೇಸಿನ ದೈವತಕ್ಕೆ ತನ್ನ ಮಾತಿನ ಗುಡಿಯನ್ನು ಕಟ್ಟು ವದರಲ್ಲಿ ತನ್ನ ಜೀವನವನ್ನೂ ತನ್ನ ಪ್ರತಿಭೆಯನ್ನೂ ಸೂರೆಗೊಳಿಸುವವನೆ ಆ ಕವಿಯು. ತನ್ನ ಕಲ್ಪನೆಯ ಅಷ್ಟೈಶ್ವರ್ಯವನ್ನೂ ಅದರ ಭೋಗಕ್ಕೆ ಬಿಡುವನು; ತನ್ನ ವಾಣಿಯನ್ನು ಅದರ ಊಳಿಗಕ್ಕಿಡುವನು. ಆ ಚಾರಿತ್ರ್ಯವು ಬೆಳಗಲೆಂದು ತನ್ನ ಕೃತಿಯನ್ನು ಕರ್ಪೂರದಂತೆ ಅದಕ್ಕೆ ಧೂಪವಾಗಿ ಸುಡುವನು. ಅಭಿನವಪಂಪನೆಂದು ಕೀರ್ತಿಶಾಲಿಯಾಗಿರುವ ನಾಗಚಂದ್ರನು ಅಂತಹ ಕವೀಂದ್ರನು.

ಸಮಕಾಲೀನರಾದ ಚಾರಿತ್ರ್ಯಚಕ್ರವರ್ತಿಗಳ ಪಾದಮಂಡಲದ ಮಾಂಡಲಿಕರಂತೆ ಇರುವದರಲ್ಲಿ ಸಾರ್ಥಕತೆಯನ್ನು ಕಂಡ ನಮ್ಮ ಕನ್ನಡ ಕವಿಗಳ ಕೀರ್ತಿಗೆ ಇದರಿಂದ ಕಳೆ ಕಟ್ಟಿದೆ. ತನ್ನ ಗುರುಗಳಾದ ಬಾಳಚಂದ್ರರ ಕೀರ್ತಿಶಾಸನಕ್ಕೆ ಸೂರ್ಯಚಂದ್ರರನ್ನು ಬರೆವಂತೆ ನಾಗಚಂದ್ರನು ಎರಡು ಪುರಾಣಗಳನ್ನು ನಿರ್ಮಿಸಿದ್ದಾನೆ. ಮೊದಲನೆ ಯದು ಮಲ್ಲಿನಾಥ ಪುರಾಣ, ಎರಡನೆಯದು ರಾಮಚಂದ್ರ ಚರಿತ ಪುರಾಣ.

ಯಾವ ಪುರಾಣವು ಮೊದಲು, ಯಾವದು ಆ ಮೇಲೆ ಎಂಬು ದನ್ನು ನಿರ್ಣಯಿಸಲು ಶಕವರ್ಷವನ್ನಾಗಲಿ ಸಂವತ್ಸರನಾಮ ವನ್ನಾಗಲಿ ಕವಿಯು ಹೇಳಿಲ್ಲ. ಪ್ರತಿಭಾ ಪುತ್ರರಾದ ಕವಿಗಳು ಊಹಾ ಸಂಭವರಾದ ಸಂಶೋಧಕರಿಗೆ ಎಡೆಗೊಡುವದು ಅವರ ಸಹಾನು ಭೂತಿಯ ನಿದರ್ಶನವಾಗಿದೆ. ಆದರೆ ನಾನು ಸಂಶೋಧಕನಲ್ಲ. ವಿಮ ರ್ಶೆಗೆ ರೂಪಕೊಡಲು ಸದ್ಯಕ್ಕೆ ಸರಿದೋರಿದಂತೆ ಕೆಲವು ಚಾರಿತ್ರ್ಯಾಂಶ ಗಳನ್ನು ಸವಿಮರ್ಶವಾಗಿ ಜೋಡಿಸುತ್ತಿದ್ದೇನೆ. ನಾನು ಕೆಳಗೆ ಕೊಡುವ ಕಾರಣಗಳನ್ನು ಪ್ರತ್ಯೇಕವಾಗಿಯಲ್ಲ ಒಟ್ಟಾರೆ ವಿಚಾರ ಮಾಡಿದರೆ ಮಲ್ಲಿನಾಥ ಪುರಾಣವು ನಾಗಚಂದ್ರನ ಪ್ರಥಮ ಮಹಾ ಕಾವ್ಯವಾಗಿರಬೇಕು. ಮಲ್ಲಿನಾಥ ಪುರಾಣವು ಚಿಕ್ಕದು, ರಾಮ ಚಂದ್ರ ಚರಿತಪುರಾಣವು ದೊಡ್ಡದು. ಮೊದಲನೆಯದರಲ್ಲಿ ಗದ್ಯಪದ್ಯ ಭಾಗಗಳು ಕೂಡಿ ೨೦೩೧. ಎರಡನೆಯದರಲ್ಲಿ ಬರಿ ಪದ್ಯಗಳೆ ೨೩೪೩. ಚಿಕ್ಕದಾದುದು ಮೊದಲನೆಯದಾಗಿರುವದು ಸಹಜ. ಮಲ್ಲಿನಾಥ ಪುರಾಣವು 'ಕಿರಿದೀ ಕಥಾಸ್ಪಂದವಿದಂ ನಿರ್ಮಿಚಿಲ್ಲಕವಿತಾರಸಮಂ ನೆರೆಪೇಳ್ದರಿಲ್ಲ ಮುನ್ನೆಂದು' ಭವ್ಯ ಜನರು ಹೇಳಲಾಗಿ ಬರೆದುದು; ಕಥೆ ಚಿಕ್ಕದು, ವರ್ಣನೆಗಾಗಿಯೂ ರಸಪುಷ್ಟಿಗಾಗಿಯೂ ಬೆಳೆದುದು. ಕಲ್ಪನಾಸ್ವಾತಂತ್ರ್ಯಕ್ಕೆ ಎಡೆ ಹೆಚ್ಚು; 'ಪಿರಿದೆನಿಸಿರ್ದ ರಾಮ

ಕಥೆಯುಂ ಕಿರಿದಾಗಿರೆ' ಹೇಳಿದುದು ರಾಮಚಂದ್ರಚರಿತಪುರಾಣ, ಹೀಗೆ ಕಾವ್ಯವನ್ನು ಕಟ್ಟಲು ಕೈ ಪಳಗಿರಬೇಕು. ಇದಲ್ಲದೆ, ಮಲ್ಲಿನಾಥ ಪುರಾಣದ ಗುಣವೆಲ್ಲವೂ ರಾಮಚಂದ್ರ ಚರಿತಪುರಾಣದಲ್ಲಿದೆ; ರಾಮಚಂದ್ರ ಚರಿತಪುರಾಣದ ಪಾತ್ರಸೃಷ್ಟಿಯು ಮಲ್ಲಿನಾಥ ಪುರಾಣದಲ್ಲಿಲ್ಲ; ಲೋಕಾನುಭವಪರಿಣತಬುದ್ಧಿಯ ಪ್ರತಿಬಿಂಬವು ರಾಮಚಂದ್ರ ಚರಿತ ಪುರಾಣದಲ್ಲಿದೆ. ಮತ್ತು, ಮಲ್ಲಿನಾಥ ಪುರಾಣವು ಹತ್ತೆಂಟು ಎಸಳಿನ ಹೂವು ಅರಳಿದಂತೆ; ರಾಮಚಂದ್ರ ಚರಿತಪುರಾಣವು ಸಾವಿರ ಕಂಬದ ಬಸ್ತಿಯನ್ನು ಕಟ್ಟಿದಂತೆ. ಮಲ್ಲಿನಾಥವು ಮೂರ್ತಿಶಿಲ್ಪ, ಚರಿತ ಪುರಾಣವು ವಾಸ್ತು ಶಿಲ್ಪ. ಗುರು ಬಾಳಚಂದ್ರಪುತ್ರನಾದ ಶುಭಕೀರ್ತಿಯು ನಾಗಚಂದ್ರನಿಗೆ ಸಮಸಮಾನವಯಸ್ಕನಾಗಿರಬೇಕು. ಚರಿತಪುರಾಣದ ಹೊತ್ತಿಗೆ ಅವನು ಕೀರ್ತನೀಯಚರಿತನಾಗಿದ್ದಾನೆ. ಮಲ್ಲಿನಾಥದಲ್ಲಿ ಅವನ ಹೆಸರಿಲ್ಲ. ವೀರಣಂದಿ ಸಿದ್ಧಾಂತಿಯ ಮಾತೂ ಹಾಗೆಯೇ. ನಾಗಚಂದ್ರನು ಅಭಿನವಪಂಪನಾದದ್ದು ಮಲ್ಲಿನಾಥ ಪುರಾಣಕ್ಕೆ ಕೈಹಾಕುವ ಮೊದಲೇ ಸರಿ. ಆದಿ ಪುರಾಣದ ಪಂಪನು ಮಾರ್ಗದ್ವಯಪರಿಣತನು; ರಸಭಾವಪೂರ್ಣನು; ವಸವೈಭವ ವರ್ಣನಾ ಲೋಲನು; ನಾಗಚಂದ್ರನೂ ಹಾಗೆಯೆ ಇರುವದರಿಂದ ಅಭಿನವಪಂಪನಾಗಿರಲು ಸಾಕು. ಆದರೆ ಮಲ್ಲಿನಾಥದಲ್ಲಿ ತಾನು ಏನಾದರೂ ನಾಗಚಂದ್ರನೆಂಬುದನ್ನು ಮರೆಯಲಾರ. '**ಭಾರತೀ ಕರ್ಣಪೂರ**' ನೆಂಬ ಅವನ ಬಿರುದು, ಇಡಿ ಮಲ್ಲಿನಾಥ ಪುರಾಣದಲ್ಲಿ (ಆಶ್ವಾಸಾಂತ್ಯದ ಪೇಟೆಂಟಾದ ಗದ್ಯವನ್ನು ಬಿಟ್ಟರೆ) **ಒಂದೇ ಒಂದು ಸಲ,** ಅದೂ ಕೊನೆಯ ಆಶ್ವಾಸದ ಕೊನೆಕೊನೆಯ ೨೫ನೆಯ ಪದ್ಯದ ಕಟ್ಟ ಕೊನೆಗೆ ಬಂದಿದೆ. ಆದೇ ಮುಂದೆ ಅವನಿಗೆ ಮೌಲಿಕವಾಗಿ ನಿಂತು, ಚರಿತಪುರಾಣದಲ್ಲಿ ಅನೇಕ ಸಲ ಬಂದು ಅವನ ಹೆಸರೊಂದಿಗೆ ಸೇರಿಬಿಟ್ಟಿತು. ಅಭಿನವಪಂಪ ಎಂದು ತನ್ನನ್ನು ವಿಶೇಷಿಸಿ ಕರೆದು

ಕೊಳ್ಳಲು ಮಲ್ಲಿನಾಥ ಪುರಾಣದ ರಚನೆಯು ಪ್ರಾರಂಭದಲ್ಲಿ ಧೈರ್ಯ ಸಾಲದೆ ಹೋಗಿದೆ ಎಂಬಂತೆ, ಆಶ್ವಾಸದ ಆದಿ ಪದ್ಯಗಳು ಸಾಕ್ಷಿ ಕೊಡುತ್ತವೆ. ಈ ಎಲ್ಲ ಮಾತುಗಳನ್ನು ಒಟ್ಟುಗೂಡಿಸಿ ವಿಚಾರಿಸಿದಲ್ಲಿ, ಮಲ್ಲಿನಾಥ ಪುರಾಣವೆ ಮೊದಲೆಂದೂ ಚರಿತಪುರಾಣವು ಆ ಮೇಲೆ ರಚಿತವಾದುದೆಂದೂ ಮನಗಾಣಿಕೆಯಾಗದೆ ಇರದು.

ಹೀಗೆ ಸಿದ್ಧವಾದಿದ ಮಾತ್ರಕ್ಕೆ ಮಲ್ಲಿನಾಥ ಪುರಾಣದ ಬೆಲೆಯು ಯಾವ ರೀತಿಯಿಂದಲೂ ಕಡಿಮೆಯಾಗದು ಇಷ್ಟೆ ಅಲ್ಲ, ಮಲ್ಲಿನಾಥ ಪುರಾಣದಲ್ಲಿ ಬರೆದ ಪದ್ಯಗಳನ್ನು ಭಾವ ಸೌಂದರ್ಯದಲ್ಲಿ ಮೀರುವ ಪದ್ಯಗಳನ್ನು ಬರೆಯುವದು ತನಗೆ ಅಸಾಧ್ಯವೆಂಬಂತೆ ಅತ್ಯಂತ ಮಹತ್ತ್ವವುಳ್ಳ ನೂರಾರು ಪದ್ಯಗಳನ್ನು ಇದ್ದಕ್ಕಿದ್ದಂತೆ ಚರಿತ ಪುರಾಣದಲ್ಲಿ ಎತ್ತಿಕೊಂಡಿದ್ದಾನೆ ನಾಗಚಂದ್ರನು. ದಿಗ್ದರ್ಶನಕ್ಕಾಗಿ ಒಂದು ಗಟ್ಟಿಯನ್ನು ಕೊಡುತ್ತೇನೆ.

| ಮಲ್ಲಿನಾಥ | | ಚರಿತಪುರಾಣ | |
|---|---|---|---|
| ಆಶ್ವಾಸ | ಪದ್ಯ | ಆಶ್ವಾಸ | ಪದ್ಯ |
| ೧ | ೧೨–೧೯ | ೧ | ೭–೧೬ |
| ೧೦ | ೧೩೩ | ೧ | ೧೭ |
| ೧ | ೨೦–೨೧ | ೧ | ೧೮–೧೯ |
| ೪ | ೯೯–೧೧೦ | ೩ | ೯೮–೧೦೮ |
| (೧೦೪ ಬೇರೆ) | | (೧೦೧–೧೦೩ ಬೇರೆ) | |
| ೮ | ೭೬–೭೮; | ೭ | ೧೩೯–೧೪೧ |
| | ೮೨–೯೨, ೯೪–೧೦೧ | | ೧೪೨–೧೫೧, ೧೫೨–೫೯ |
| | ೧೦೩–೧೦೮ | | ೧೬೪–೧೬೫ |
| ೯ | ೮೯, ೯೨ | | ೮೧, ೮೫ |

| | | | |
|---|---|---|---|
| ೧೦ | ೨೭ (೨ ಸಾಲು) | ೯ | ೧೦೮ (೨ ಸಾಲು) |
| ೧೧ | ೧೦, ೬೫ | ೧೩ | ೧೧೬, ೧೫೨ |
| | ೧೩, ೫೪ | ೧೬ | ೫೯, ೬೧ |
| ೧೨ | ೧೭೫–೧೭೮ | ೫ | ೭–೧೦ |
| ೧೪ | ೧೧ | ೧೬ | ೬೬ |
| | ೨೫೫–೨೬೩ | | ೭೮–೮೨ |
| | ೨೬೬–೨೮೧ | | ೮೩–೯೬ |
| ( ೨ ಗದ್ಯಗಳು ) | | ( ೨ ಗದ್ಯಗಳು ) | |
| ೪ | ೯೯–೧೧೯ | ೩ | ೯೮ ೧೦೮ |
| | ೧೦೩–೧೦೮ | | ೧೬೪–೧೬೫ |

ಹೀಗೆ ಎತ್ತಿಕೊಂಡಿದ್ದುದು ಪದ್ಯಗಳು ಕವಿಯ ಪೌರುಷವಲ್ಲ; ಅವನ ಅದ್ಭುತಪ್ರತಿಭೆಯು ಅವನಿಂದ ಪಡೆದ ಆದರದ ಕಾಣಿಕೆ. ಮಹಾ ಕವೀಶ್ವರರಲ್ಲಿ ಯಾರೂ ಬರೆಯದಂಥ ಮಲ್ಲಿಜಿನೇಂದ್ರ ಮಹಾ ಪುರಾಣವನ್ನು ಬರೆಯಲು ಭವ್ಯ ಜನರು ಹೊಗಳಿ ಬೇಡಿಕೊಳ್ಳಬೇಕಾದರೆ, ನಾಗಚಂದ್ರನು ಅವರ ವಿಶ್ವಾಸಕ್ಕೆ ಪಾತ್ರನಾಗುವಂತೆ ದುಡಿದಿದ್ದನು, ಪಡೆದಿದ್ದನು.

ಸಿದ್ಧಾಂತಾದ್ಯಖಿಳಾಗಮಾರ್ಥನಿಪುಣವ್ಯಾಖ್ಯಾನ-
ಸಂಶುದ್ಧಿಯಿಂ ।
ಶುದ್ಧಾಧ್ಯಾತ್ಮಕತತ್ತ್ವನಿರ್ಣಯವಚೋವಿನ್ಯಾಸದಿಂ,
ಪ್ರೌಢಿಸಂ ॥
ಬದ್ಧವ್ಯಾಕರಣಾರ್ಥಶಾಸ್ತ್ರಭರತಾಲಂಕಾರ ಸಾಹಿತ್ಯದಿಂ ।
ರಾದ್ಧಾಂತೋತ್ತಮ **ಬಾಳಚಂದ್ರ ಮುನಿಯುಂ**ತಾರ್
ಖ್ಯಾತರೀ ಲೋಕದೊಳ್ ॥

ಇಂತಹ ಹೊಗಳಿಕೆಗೆ ಪಾತ್ರನಾದ ಗುರುವಿನ ಶಿಷ್ಯನು ನಾಗಚಂದ್ರ. ಆಗಮ, ಅಧ್ಯಾತ್ಮ, ಅರ್ಥಶಾಸ್ತ್ರ ಮತ್ತು ಸಾಹಿತ್ಯ ಈ ವಿವಿಧ

ಶಾಖೆಗಳಲ್ಲೂ ಒಬ್ಬ ಗುರುವಿನಿಂದಲೆ ಶಿಕ್ಷಣ ದೊರೆಯುವ ಭಾಗ್ಯ ನಮ್ಮ ಕವಿಗಳದಾಗಿತ್ತು. ಸಮ್ಯಕ್ತ್ವ ಸಂಪಾದಕರಾದ ಜೈನರು ಶಿಕ್ಷಣದಲ್ಲಿ ಸಮಗ್ರಪರಿಪೂರ್ಣತೆಯನ್ನು ಧ್ಯೇಯವಾಗಿಟ್ಟುಕೊಂಡಿದ್ದುದು ಸ್ವಭಾವಸಿದ್ಧವೇ ಆಗಿದೆ. ಅಂಥ ಗುರುಪರಂಪರೆಯು ನಮ್ಮ ಕವಿಗಳಿಗೆ ದೊರಕಿತ್ತು. ಶುಭಕೀರ್ತಿಯಂಥ ಮಗನನ್ನೂ ನಾಗಚಂದ್ರನಂಥ ಶಿಷ್ಯನನ್ನೂ ಅವರು ಪಡೆದದ್ದು ಅವರ ಯೋಗ್ಯತೆಯನ್ನು ಸೂಚಿಸುವದು. ಅವರ ಪ್ರಭಾವದಿಂದ ನಾಗಚಂದ್ರನಲ್ಲಿ, ಶಾಂತರಸದಲ್ಲಿ ಪರಿಣತಿಯುಂಟಾಗಿತ್ತು; ಯೋಗಮಾರ್ಗದಲ್ಲಿ ಅನುರಾಗ ಉಂಟಾಗಿತ್ತು; 'ಜಿನೇಂದ್ರಮಹಾನುಭಾವವರ್ಣನೆ'ಯು ನಿಶ್ರೇಯಸ ಶ್ರೀಪದಸಾಧಕತ್ವದ ಮನವರಿಕೆಯಾಗಿದ್ದಿತು. ನಾಗಚಂದ್ರನ ಎರಡೂ ಕೃತಿಗಳೂ ಶಾಂತಕ್ಕೆ ನೋಂತಿವೆ, ಗುರುವಿನಡಿಗೆ ಮುಡಿಪಾಗಿವೆ; ಮಹಾನುಭಾವವರ್ಣನೆಗೆ ಮಾರಿಕೊಂಡಿವೆ.

ನಾಗಚಂದ್ರನು ಶಕಕರ್ತನಾದ ಚಾಳುಕ್ಯವಿಕ್ರಮನ ಕಾಲಕ್ಕೆ ಬದುಕಿದ್ದನು ಅವನ ವಿದ್ಯಾಪಕ್ಷಪಾತವು ಜಗದ್ವಿಖ್ಯಾತವಾಗಿದೆ. ವಿಜ್ಞಾನೇಶ್ವರಪಲ್ಲಣರಿಂದ ಅವನ ಕೀರ್ತಿದುಂದುಭಿಯು ಮೊಳಗಿಸಲ್ಪಟ್ಟಿದೆ. ಮಗನಾದ ಸರ್ವಜ್ಞ ಸೋಮೇಶ್ವರನಿಂದ ಯಶವು ಗುಡಿ ಕಟ್ಟಿದೆ. ಬಿಜಾಪುರ ಮ್ಯೂಝಿಯಮ್ಮಿನಲ್ಲಿರುವ ವಿಕ್ರಮನ ಕಾಲದ ಒಂದು ಮಹಾ ಶಾಸನವನ್ನೋದಿ ಗೆಳೆಯರಾದ ಹಲಸಂಗಿ ಚೆನ್ನಮಲ್ಲಪ್ಪನವರು ಅದು ನಾಗಚಂದ್ರಕೃತಿಯಾಗಿರಬೇಕೆಂಬುದನ್ನು ಕವಿಚರಿತೆಕಾರರಿಗೆ ತಿಳಿಸಿದ ಮಾತಂತಿರಲಿ, ಶ್ರವಣ ಬೆಳಗೊಳದ ಅನೇಕ ಶಾಸನಗಳಲ್ಲಿ ನಾಗಚಂದ್ರನ ಪದ್ಯಗಳು ಮೆರೆಯುತ್ತಿವೆ. ನಾಗಚಂದ್ರನು ಮಹಾಕವಿಯಾಗುವ ಪೂರ್ವದಲ್ಲ ಅವನಿಗೆ ಶಾಸನಕವಿಯಾಗುವ ಜಾನಪದಸನ್ಮಾನವು ದೊರೆತಿರಲು ಸಾಕು. ಮಲ್ಲಿನಾಥದಲ್ಲಿಯೂ ಚರಿತಪುರಾಣದಲ್ಲಿಯೂ ಸಾಮಾನ್ಯವಾಗಿಯೆ ಮಹಾನು

ಭಾವಫಳವರ್ಣನಾ ರೂಪವಾಗಿ ಬರುವ ಪದ್ಯಗಳು ಮಹಾಕಾವ್ಯ ರಚನಾಪೂರ್ವದಲ್ಲಿಯೇ ರಚಿತವಾಗಿ ಗುರುಕೃಪೆಯನ್ನು ಪಡೆದವುಗಳಾಗಿರಬೇಕು. ನಾಗಚಂದ್ರನು ಅವುಗಳ ಬಗ್ಗೆ ತೋರ್ಪಡಿಸುವ ಆದರವು ಕೇವಲ ಆತ್ಮಪ್ರತ್ಯಯಮೂಲಕವಾಗಿರಲಾರದು. ನಾಗಚಂದ್ರನ ಯೋಗವಿಷಯಕವಾದ ಪ್ರೀತಿಯು ತನ್ನ ಮಗನಿಗಾಗಿ ಮೇಘಚಂದ್ರನಿಂದ ಪೂಜ್ಯಪಾದಕೃತಸಮಾಧಿಶತಕಕ್ಕೆ ಬರೆಯಿಸಿದ ಕನ್ನಡವ್ಯಾಖ್ಯಾನದಿಂದಲ್ಲದೆ, ಕವಿಚರಿತೆಯ ಮೂರನೆಯ ಸಂಪುಟದ ೩೬ನೆಯ ಪುಟದಲ್ಲಿ ಉಲ್ಲೇಖಿತವಾದ 'ಯೋಗಾಮೃತ'ವೆಂಬ ಶತಕದಿಂದಲೂ ಕಂಡುಬರುವದು. ಇದರಲ್ಲಿ ೧೧೦ ಪದ್ಯಗಳಿವೆಯಂತೆ. ಚರಿತಕಾರರು ಉದಾಹರಿಸಿದ ಮೂರು ಪದ್ಯಗಳಲ್ಲಿ ಕೊನೆಯದಾದ

> ಕಾನಲ ಬಾನಲಸೀರಂ।
> ಮೀನೊಲ್ಗಂ ರಾಜಹಂಸನೊಲ್ಗಮೆ ಮಿಥ್ಯಾ।
> ಜ್ಞಾನಿಭವಸುಖವನೊಲ್ವಂ।
> ತೇನೊಲ್ಗಮೆ ಪರಮಪಾವನಜ್ಞಾನಪರಂ।

ಎಂಬೀ ಪದ್ಯವು ಮಲ್ಲಿನಾಥದ ೧೩ನೆಯ ಆಶ್ವಾಸದ ೧೬೩ನೆಯ ಪದವಾಗಿದೆ. ಉದಾಹರಿಸಿದ ಉಳಿದೆರಡು ಪದ್ಯಗಳಲ್ಲಿ ಬೇರೆಯವರ ಮುದ್ರಿಕೆಯಿಲ್ಲ. ಮತ್ತು ಈ ಚಿಕ್ಕ ಪದ್ಯಗ್ರಂಥವು ನೀತಿಸಾರಗಳಂತೆ ಬೇರೆ ಬೇರೆಯವರ ಕವಿತಾಸಂಗ್ರಹವಾಗಿರಲಾರದು. ಚರಿತೆಕಾರರಿಗೂ ಭಾಷಾ ದೃಷ್ಟಿಯಿಂದ ಯೋಗಾಮೃತವು ಸುಮಾರು ೧೨ನೆಯ ಶತಮಾನ್ನದಾಗಿ ತೋರುವದರಿಂದ ನಾಗಚಂದ್ರರಚಿತವಾಗಿರಲೂ ಬಹುದು. ಮಹಾಕಾವ್ಯಗಳಲ್ಲದೆ ಬೇರೆ ಗ್ರಂಥಗಳನ್ನು ನಾಗಚಂದ್ರನು ಬರೆದಿರುವದಾಗಿ ದೇವಚಂದ್ರನ ರಾಜಾವಳಿ ಕಥೆಯು ಹೇಳುವದು, 'ಜಿನಮುನಿತನಯ'ವಾಗಲಿ ಜಿನಾಕ್ಷರಮಾಲೆಯಾ'ಗಲಿ ಅವನ ಕೃತಿಯಾಗದಿದ್ದರೂ 'ಯೋಗಾಮೃತ'ವು ಹಾಗಿರಲು ಸಾಕು.

'ಈ ಕವಿಯ ದೇಶ, ಕಾಲ, ವಂಶ ಮುಂತಾದುದಾವುದೂ ಈತನ ಗ್ರಂಥಗಳಿಂದ ತಿಳಿಯುವುದಿಲ್ಲ' ಎಂದು ಚರಿತೆಕಾರರು ಹೇಳುವರು.

ನಿಜವಿಭವೋದಯಂ ಸಫಳವಾಯ್ತೆನೆ ಮಲ್ಲಿಜಿನೇಂದ್ರ
ಗೇಹಮಂ
**ವಿಜಯಪುರ**ಕ್ಕಳಂಕರಣಮಾಗಿರೆ ಮಾಡಿಸಿ.

ಮಲ್ಲಿನಾಥ ( ೧೪-೨೯೭ )

ಈ ಪದ್ಯದೊಳಗಿನ ವಿಜಯಪುರವು ಈಗಿನ ವಿಜಾಪುರವೇನೊ ಎಂಬ ಕುತೂಹಲವು ವಿಜಾಪುರದ ಬಳಿಯಲ್ಲಿ ದೊರೆಯುವ ಶಾಸನಗಳಲ್ಲಿ ಅಭಿನವಪಂಪನ ಕಾವ್ಯಗಳೊಳಗಿನ ಪದ್ಯಗಳನ್ನು ಕಂಡು ಉದ್ದೀಪಿತವಾಗುವದು. ಅದಲ್ಲದೆ ಮಲ್ಲಿನಾಥಪುರಾಣದ ೮ನೆಯ ಆಶ್ವಾಸ ೧೨೫ನೆ ಪದ್ಯವು(ಇದೇ ಪದ್ಯವು ರಾಮಚಂದ್ರ ಚರಿತಪುರಾಣದಲ್ಲಿ ೭ನೆಯ ಆಶ್ವಾಸ ೧೬೬ನೆಯದಾಗಿದೆ)– ಹೀಗಿದೆ:—

ಓವದೆ **ಮೀನಮೇಷ ವೃಷಭಾ**ದಿಗಳಂ ಕ್ರಮದಿಂ ದಿನಾಧಿಪಂ
ಸೇವಿಸಿ ಮತ್ತೆ **ಕನ್ನೆ**ಯೊಡಗೂಡಲೊಡಂ ಕಿಡೆ ತನ್ನ ತೇಜಮು
ನ್ನಾವುದೊ ಕಜ್ಜಮೆಂದು ತೊಲೆಯಂ ಜನರಂಜನೆಗೇರಿ
ತೇಜಮಂ।
ಭೂವಲಯಕ್ಕೆ ಬೀರಿದನಿದೇಂ **ಪ್ರಭು** ಮಾಡಿದ **ಮಾಯೆ**
ಸಲ್ಲದೇ ॥

ಇದು ಶರತ್ಪ್ರವೇಶದ ಕಾಲದ ದಿನಾಧಿಪನ ವರ್ಣನೆ. ಇಲ್ಲಿ ಶ್ಲೇಷೆ, ಪರಿಹಾಸಗರ್ಭಿತಸರಣಿ, 'ಪ್ರಭು' ಎಂಬ ತೋರಿಕೆಗೆ ಅನುಚಿತವಾದ ಪದಪ್ರಯೋಗ – ಒಂದೊಂದೂ ಸಂಶಯವನ್ನುಂಟು ಮಾಡುವವು. ಮಲ್ಲಿನಾಥದ ೮ನೆಯ ಆಶ್ವಾಸದ ( ರಾಮಚಂದ್ರ ಚರಿತಪುರಾಣದ ೭ನೆಯ ಆಶ್ವಾಸ ) ಶರದ್ವರ್ಣನೆಗೆ ಮೊತ್ತಗಲ್ಲಿ ಔಚಿತ್ಯವಿದ್ದರೂ ಅದ

ರೊಳಗಿನ ಪ್ರತ್ಯೇಕ ಪದ್ಯಕ್ಕೂ ಪ್ರತ್ಯೇಕ ಔಚಿತ್ಯ ಹೇಳಲು ಬರದು. ಪ್ರಕೃತ ಪದ್ಯವು ಹಾಗೆಯೆ. ಈ ಪದ್ಯವನ್ನು ಬಿಟ್ಟರೆ ಎರಡೂ ಕಾವ್ಯಗಳಿಗೂ ಬಾಧೆಯಿಲ್ಲ. ಈ ಪದ್ಯದೊಳಗಿನ ಪರಿಹಾಸಗರ್ಭಶ್ಲೇಷೆಗೆ ಚಾರಿತ್ರಿಕ ಔಚಿತ್ಯವಿದ್ದಿರಬೇಕೆ ಹೊರತು– ಕಾವ್ಯವಸ್ತುವಿನ ರೀತಿಯಿಂದಾಗಲಿ, ವರ್ಣನಾ ರೀತಿಯಲ್ಲಾಗಲಿ ಔಚಿತ್ಯ ಕಾಣದು. ಇದರೊಳಗಿನ 'ಪ್ರಭು' ಹಾಗೂ 'ಮಾಯೆ' ಶಬ್ದಗಳು ಮತ್ಸ್ಯೇಂದ್ರಗೋರಖಪಂಥಸಂಸರ್ಗದಲ್ಲಿ ಬಳೆದು ಮುಂದೆ ಬಸವನೊಡನೆ ಪ್ರಸಂಗ ಮಾಡಿ ಕನ್ನೆ (ಮಹಾದೇವಿಯಕ್ಕ) ಯೊಡನೆ ಶಿವಾನುಭವಗೋಷ್ಠಿ ಬೆಳೆಸಿ, ಪವಾಡಗಳಿಂದಲೂ ಜನಪ್ರಿಯನಾಗುತ್ತಲಿದ್ದು ಮಾಯೆಯನ್ನು ಗೆದ್ದ ಪ್ರಭುವೆಂದು ಪ್ರಸಿದ್ಧಿಗೆ ಬರುತ್ತಿದ್ದ ಅಲ್ಲಮನನ್ನು ಕುರಿತು ಇರಬೇಕೆಂದು ಎತ್ತಿ ಒತ್ತಿ ಹೇಳುವಂತೆ ನನಗಂತೂ ತೋರುವದು. ಒಂದು ಹಟಯೋಗ ಗ್ರಂಥದ ಕೊನೆಗಿರುವ ನಾಥಸಂಪ್ರದಾಯದ ಪಟ್ಟಿಯಲ್ಲಿ ಅಲ್ಲಮಪ್ರಭುವಿನ ಹೆಸರನ್ನು ಓದಿದುದು ನನಗೆ ನೆನಪಿದೆ. ಗೊರಕ್ಷನ ಕೂಡಾದ ಚರ್ಚೆಯ ವಿಷಯವು ಶೂನ್ಯಸಂಪಾದನೆಯಲ್ಲಿಯೂ, ಪ್ರಭುಲಿಂಗ ಲೀಲೆಯಲ್ಲಿಯೂ ಬಂದಿದೆ. ಅವನು ಕನ್ನಡದಲ್ಲಿ ವಚನಗಳನ್ನೂ ಬರೆದ ಹಾಗೆ ಶೂನ್ಯಸಂಪಾದನೆಯು ಪ್ರಮಾಣಿಸುವದು. ಗೋರಕ್ಷನು ಅನೇಕಭಾಷಾಪಂಡಿತನಿದ್ದನು.ಅವನು ಮತ್ಸ್ಯೇಂದ್ರನ ಶಿಷ್ಯನು. ಪ್ರಭುವಿನ ಮಹಾನುಭಾವ ಜೀವನಕ್ಕೆ ಹೀಗೆ ಮೀನಮೇಷವೆಂದು ಪ್ರಾರಂಭವಾಯಿತೆಂದು ನಾಗಚಂದ್ರನ ಕಟುಕಿ. ವೃಷಭ – ಕನ್ಯೆ ಶಬ್ದಗಳು ಬಸವನನ್ನೂ ಮಹಾದೇವಿಯಕ್ಕನನ್ನೂ ಸೂಚಿಸುವವು. ತೊಲೆಯೇರಿದ ತೇಜವು ತಿಡಿಯಾಡುವ ಅಥವಾ ಅದೇ ವಿಧದ ಯಾವದಾದರೊಂದು ಪ್ರಭುವಿನ ಕೇಳಿಕೆಯು ಪವಾಡದ ಪರಿಹಾಸವಿದೆ. ಪ್ರಭುವು ಪವಾಡದ ಗೊಂದಲಿಗನಲ್ಲ; ಅಧ್ಯಾತ್ಮನಿಶ್ಚಯಮಾರ್ಗದ ನಿರ್ವಿಕಾರ ಸಾಹಸಿಯು–

ಎಂಬುದು ಶೂನ್ಯಸಂಪಾದನೆಯುನ್ನೋದಿದವರಿಗೆ ಮನವರಿಕೆಯಾಗು ವಂತಿದೆ ಆದರೂ ಆಗಿನ ಜೈನ ಸಾಂಪ್ರದಾಯಿಕರಿಗೆ ಹಾಗೆ ತೋರಿದ್ದರೆ ಆಶ್ಚರ್ಯವಿಲ್ಲ. ಏನೆ ಇರಲಿ, ಈ ಕಲ್ಪನೆಯು ಸಮಂಜಸವಾಗಿದ್ದರೆ ಕಲ್ಯಾಣ ಬಾಗೇವಾಡಿಗಳತ್ತಲಿರುವ ವಿಜಾಪುರ ಪ್ರಾಂತದಲ್ಲಿಯೆ ನಾಗಚಂದ್ರನು ಇರಲಿಕ್ಕೆ ಸಾಕು. ಆವನ ಕಾಲ ಪ್ರಭುವಿನ ಕಾಲ. ಪ್ರಭುವು ಬಸವನಿಗೆ ವಯಸ್ಸಿನಲ್ಲಿ ಹಿರಿಯ. ಕರ್ಣಪಾರ್ಯನು ನೇಮಿನಾಥ ಪುರಾಣ ಬರೆಯುವ ಕಾಲಕ್ಕೆ (೧೧೪೫ ಸುಮಾರು) ನಾಗಚಂದ್ರನು ಸಂದು ಬಹಳ ದಿನಸಗಳಾಗಿರಲಾರವು. ೧೧೪೮ರಲ್ಲಿ ಮೇಘಚಂದ್ರನಿಂದ ವಿದ್ಯೆ ಕಲಿವ ಒಬ್ಬ ಮಗಸಿದ್ಧನೆಂಬ ಮಾತಿನಿಂದಲೂ ಮೊದಲಿನ ಮಾತೇ ದೃಢವಾಗುವದು.

ನಾಗಚಂದ್ರನ ಪೂರ್ವದ ಜೈನ ಕವಿಗಳು ಆಗಮವಿಷಯಗಳನ್ನಲ್ಲದೆ ಲೌಕಿಕ ವಿಷಯಗಳನ್ನೂ ಕುರಿತು ಬರೆಯುತ್ತಿದ್ದರು. ಆದರೆ ನಾಗಚಂದ್ರನು ಮಾತ್ರ ಕೇವಲ ಆಗಮಮಾರ್ಗವನ್ನೆ ತನ್ನ ಕಾವ್ಯಗಳಲ್ಲಿ ಪ್ರತಿಪಾದಿಸುವನು. ರಾಮಚಂದ್ರಚರಿತಪುರಾಣವು ಜೈನಾಗಮಾನುಸಾರಿಯಾಗಿದೆ. ಅದರ ಉಪಕ್ರಮ ಉಪಸಂಹಾರಗಳು ಮಲ್ಲಿನಾಥದಿಂದ ಬೇರೆಯಾಗಿಲ್ಲವಷ್ಟೆ ಅಲ್ಲ ಅದೇ ಪದ್ಯಗಳಿಂದಲೆ ಅದು ಸಮೆಯಲಾಗಿದೆ. ಇವನ ಗುರುಭಕ್ತಿಯು ವಿುಗಿಲಾಗಿದೆ. ಮಲ್ಲಿಜಿನನು ಜಿನಪದವಿಯನ್ನು ಪಡೆಯುವ ಪೂರ್ವದಲ್ಲಿ 'ಬಾಳಚಂದ್ರಾಪರ ನಾಮಧೇಯರಪ್ಪ ಶ್ರೀ ನಾಗಭಟ್ಟಾರಕರಿ' ಗೆ ವಂದಿಸಿ ಮುಂದೆ ಹೋಗುವನು. ರಾಮಚಂದ್ರಚರಿತಪುರಾಣದಲ್ಲಿ ೧-೧೭ನೆಯ ಪದ್ಯವು ತನ್ನ ಗುರು ಬಾಳಚಂದ್ರರನ್ನು ಸ್ತುತಿಸಲು ಯೋಜಿಸಲಾಗಿದೆ. ಆದರೆ ಅದು ಮಲ್ಲಿನಾಥದಲ್ಲಿ ಶ್ರೀ ನಾಗಭಟ್ಟಾರಕರನ್ನು ವರ್ಣಿಸಲು ಒಳಸಿದ್ದಾಗಿತ್ತು. ಭಾವಿಜಿನನಿಗು ವಂದ್ಯರಾದ ವಿಭೂತಿ ಶ್ರೀ ನಾಗಭಟ್ಟಾರಕರಿಂದ ತನ್ನಗುರು ಬಾಳಚಂದ್ರರು ನಾಗಚಂದ್ರನಿಗೆ ಅಭಿನ್ನರಾಗಿ ತೋರುವರು.

ಅರವಿಂದಸ್ಮೇರವಾಸ್ಯಂ ತಿಳಿಪೆ ಹೃದಯಸಂಶುದ್ಧಿಯಂ
ಮಾನಸಂಶಾಂ।
ತರಸಾಧೀನಂ ಸಮಾಧಾನಮನರಿಪೆ ತಪಸ್ತಪ್ತಮುತ್ತಪ್ತ
ಕಾರ್ತ॥
ಸ್ಫುರಶಾಖಾಲೀಲೆಯಂ ಪಾಳಿಸೆ ತನು, ನಯನಂ ಕಾಳ್ಪುರಂ
ಮಾಡೆಕಾರು।
ಣ್ಯಾರಸಸ್ರೋತಂಗಳಿಂ ಲೋಕಮನೆರಗಿಸಿದಂ ಬಾಳಚಂದ್ರ
ವ್ರತೀಂದ್ರಂ।

ಜಿನನ ಜನಭಕ್ತಿ ಇದಕ್ಕೂ ಮಿಗಿಲು
ಕುಸುಮಶ್ರೀಖಂಡಕೃಷ್ಣಾಗುರುವಿವಿಧ ಫಳಾದ್ಯರ್ಚನಾ
ದ್ರವ್ಯದಿಂದ।
ರ್ಚಿಸಿಮತ್ತಂ ತನ್ನ ಚಿತ್ತಂ ತಣಿಯದೆ ನರವದ್ಯಂ ಚಿರಸ್ಥಾಯಿ
ಸಿದ್ಧಂ॥
ಪೊಸತೆಂಬೀ ಪೆರ್ಮೆಯಿಂ ಪಾವನಮೆನಿಸಿದ ವಾಕ್ಯೋಪ
ಹಾರಂಗಳಿಂದ।
ರ್ಚಿಸಿದಂ ಶ್ರೀ ಮಲ್ಲಿಭಟ್ಟಾರಕ ಪದಯುಗಮಂ ಭಾರತೀ
ಕರ್ಣಪೂರಂ॥

ಜಿನನ ಅರ್ಚನಾಭಕ್ತಿಯಿಂದಷ್ಟೆ ತೃಪ್ತಿಯಾಗದೆ ‘ಸಿದ್ಧಂ ಪೊಸತು’ ಎಂಬೀ ಕಾವ್ಯದಿಂದ ಮತ್ತೆ ಅರ್ಚಿಸಿರುವನು. ಕಾಯವನಷ್ಟೆ ಅಲ್ಲ ತನ್ನ ವಾಕ್ಕನ್ನೂ ಜಿನಸೇವೆಗೆ ಸಲ್ಲಿಸಿರುವನು. ಹೀಗೆ ತನು ಮನಗಳನ್ನರ್ಪಿಸಿ ಸಂತೃಪ್ತನಾಗದೆ ತನ್ನ ಧನವನ್ನೂ ಅರ್ಪಿಸಲಿಕ್ಕೆಂದೊ ವಿಜಯಪುರದಲ್ಲಿ ಮಲ್ಲಿಜಿನೇಶ ಮಂದಿರವನ್ನೂ ಕಟ್ಟಿಸಿದನು.

ನಿಜವಿಭವೋದಯಂ ಸಫಳಮಾಯ್ತೆನೆ ಮಲ್ಲಿಜಿನೇಂದ್ರ
ಗೇಹಮಂ।

ವಿಜಯಪುರಕ್ಕಳಂಕರಣಮಾಗಿರೆ ಮಾಡಿಸಿ ತಚ್ಚರಿತ್ರಮುಮಂ ॥
ಸುಜನಸಭಾವತಂಸಮೆನೆ ಪೇಳ್ದುದಿತೋದಿತಮಾಗೆಮಾಡಿದಂ ।
ನಿಜಕವಿತಾಗುಣೋದಯಮುಮೆಂಬಿನಮೀಕೃತಿ ನಾಗಚಂದ್ರನಾ॥

ತನ್ನ ವೈಭವದ ಸಾಫಲ್ಯವನ್ನು ದೇವಗೃಹವನ್ನು ಕಟ್ಟಿಸುವಲ್ಲಿ; ತನ್ನ ಕಾವ್ಯದ ಸಾಫಲ್ಯವನ್ನು ಸುಜನರ ಕಿವಿಗೆ ಆಭರಣವಾಗುವಂತಹ ಕಾವ್ಯ ಕಟ್ಟುವಲ್ಲಿ—ಕಾಣುವ ವಿಜಯಪುರದ ಗುರುಜಿನ ಭಕ್ತನಾದ ಕವಿಯು ಈ ನಾಗಚಂದ್ರನು. ನಡೆವಳಿಕೆಗೆ ಮೇಲುಪಂಕ್ತಿ ಹಾಕಿದ ಆಚಾರ್ಯ ಪದವಿಯಿಲ್ಲದಿದ್ದರೂ, ಆಚಾರ್ಯಪಾದಪದ್ಮೋಪಜೀವಿಯಾದ ನುಡಿವಳಿಕೆಯಿಂದಲೂ ಅದಕ್ಕೆ ಅವಿರುದ್ಧವಾದ ನಡೆವಳಿಕೆಯಿಂದಲೂ ಅಮರನಾದ ಕವಿಯು ನಾಗಚಂದ್ರನು. 'ನಿಚ್ಚಂ ಪೊಸತು' ಎನಿಸುವ ಕಾವ್ಯವು ಹೀಗೆ ತನ್ನರಿಕೆಯ ಜೀವನದ ಗರ್ಭದಿಂದ ಉದಯಿಸುವದು. ಮಲ್ಲಿನಾಥ ಪುರಾಣವು ಅಂಥ ಕಾವ್ಯ.

## ೨. ಮಲ್ಲಿನಾಥಪುರಾಣದಲ್ಲಿ ಚಿರಂತನಕಾವ್ಯ

ವೃಷಭಸೇನ ಗೌತಮ ಕೂಚಿಭಟ್ಟಾರಕ ನಂದಿಮುನೀಶ್ವರ ಕವಿಪರಮೇಷ್ಠಿ ವೀರಸೇನ ಜಿನಸೇನ ಗುಣಭದ್ರ ಪರಂಪರೆಯಿಂದ ಬಂದ ಮಲ್ಲಿಜಿನಚರಿತವು ಈ ಪುರಾಣದಲ್ಲಿ ಕಥಿತವಾಗಿದೆ. ಶ್ರೀವಿಜಯರು ಚಂದ್ರಪ್ರಭಪುರಾಣವನ್ನು ಬರೆದುದು ನಿಜವಿದ್ದರೆ ಕನ್ನಡದಲ್ಲಿ ಅವರಿಂದ ಮೊದಲಾದ ಚಂಪೂಪುರಾಣಕಾವ್ಯಪದ್ಧತಿಯು ನಮಗೆ ಈಗ ತಿಳಿದಮಟ್ಟಿಗೆ ಅಸಗ(ಹೊನ್ನನ ಹೇಳಿಕೆ), ಗುಣವರ್ಮ, ಪಂಪ, ಪೊನ್ನ, ರನ್ನ ಈ ಕವಿಪಂಚಕದಿಂದ ಪರಿಪುಷ್ಟವಾಗಿ ನಾಗಚಂದ್ರನಿಂದ ಮಲ್ಲಿನಾಥದಲ್ಲಿ ಪ್ರತಿಷ್ಠೆ ಹೊಂದಿದೆ. ಮಲ್ಲಿಜಿನನ ವಿಷಯದಲ್ಲಿ ಶ್ವೇತಾಂಬರ – ದಿಗಂಬರರಲ್ಲಿರುವ ಸ್ತ್ರೀಪುರುಷಭೇದದ ಮಾತನ್ನು ನಾವು ಬದಿಗಿಟ್ಟರೆ ಇಲ್ಲಿಯ ಕಥೆಯು ಸ್ವಲ್ಪದರಲ್ಲಿ ಹೀಗಿದೆ:— ಕಚ್ಛಾವತಿವಿಷಯದ ವೀತಶೋಕರಪುದ ವೈಶ್ರವಣನೆಂಬ ಅರಸನು

ಬಿರುಗಾಳಿಗೆ ಬಿದ್ದ ವಟವೃಕ್ಷವನ್ನು ನೋಡಿ ನಿರ್ವೇಗದಿಂದ ಮಗನಿಗೆ ರಾಜ್ಯವನ್ನು ಕೊಟ್ಟು ನಾಗಗಿರಿಯಲ್ಲಿ ನಾಗಯತಿಗಳಿಂದ ಧರ್ಮವನ್ನು ಕೇಳಿ ಸಮ್ಯಕ್ತ್ವಪೂರ್ವಕವಾಗಿ ತಪವನ್ನು ಮಾಡಿ ಕಾಲಾಂತರದಲ್ಲಿ ಅಪರಾಜಿತವಿಮಾನದಲ್ಲಿ ಅಹಮಿಂದ್ರನಾಗುವನು; ಎರಡನೆಯ ಜನ್ಮದಲ್ಲಿ ಮಿಥಿಳಾಪುರದ ಕುಂಭರಾಜಪ್ರಜಾಪತಿಯ ಹೊಟ್ಟೆಯಲ್ಲಿ ಬಂದು ಮಲ್ಲಿನಾಥನೆಂದು ಹೆಸರುಹೊಂದಿ ಕೌಮಾರ್ಯದಲ್ಲಿಯೇ ಪರಿನಿಷ್ಕ್ರಮಣ ಕಲ್ಯಾಣವನ್ನು ಪಡೆದು ಮಾರ್ಗಶಿರ ಶುದ್ಧ ಏಕಾದಶಿಯಲ್ಲಿ ಕೇವಲಜ್ಞಾನೋತ್ಪತ್ತಿಯಾಗಿ ಫಾಲ್ಗುಣ ಪಂಚಮಿಯಲ್ಲಿ ಮುಕ್ತನಾಗುವನು. ಕಥಾವಸ್ತುವೇನೊ ಕಿರಿದು, ಆದರೆ ಅದರಲ್ಲಿ ವರ್ಣಿತವಾದ ಮಲ್ಲಿನಾಥಮಹಾನುಭಾವವು ಎಲ್ಲಕ್ಕೂ ಹಿರಿದು

ಪ್ರಾಚೀನಕಾಲದಿಂದಲೂ ಋಷಿಗಳಿಗಾಗಲಿ ಕವಿಗಳಿಗಾಗಲಿ, ದರ್ಶನಕ್ಕಾಗಲಿ, ವರ್ಣನಕ್ಕಾಗಲಿ ಒಂದೆ ಒಂದು ವಿಷಯವಿದೆ; ಅದೆಂದರೆ ಆನಂದಾನುಭವ—ಆನಂದವ್ಯಂಜನ.

ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।
ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರಮಾಮಮೃತಂಕೃಧಿ ॥

ಎಂದು ವೇದದಲ್ಲಿ ಕಾಶ್ಯಪಋಷಿಯು ಹಾಡಿದುದರಿಂದ;

ಸಏಕೋಬ್ರಹ್ಮಣ ಆನಂದಃ। ಶ್ರೋತ್ರಿಯಸ್ಯಚಾಕಾಮಹತಸ್ಯ। ಸಯಶ್ಚಾಯಂ। ಸಯಶ್ಚಾಸಾವಾದಿತ್ಯೇ। ಸಏಕಃ ।

ಎಂದು ತೈತ್ತಿರೀಯವು ಉಸಿರಿದುದರಿಂದ, ಮಾರಬುದ್ಧರ ಸಂಗ್ರಾಮ ಕಥೆಗಳು ಹುಟ್ಟಿದುದರಿಂದ; ಕಾಮನನ್ನು ಸುಟ್ಟು ಸತಿಯಲ್ಲಿ ಪಶುಪತಿಯು ದೇವಸೇನಾನಿಯಾದ ಕುಮಾರನನ್ನು ಪಡೆದ ಸಂಭ್ರಮವನ್ನು ಶೈವಪುರಾಣಗಳು ಕೀರ್ತಿಸಿದುದರಿಂದ; ಕವಿಕುಲಗುರು ಕಾಲಿದಾಸನು ಕುಮಾರಸಂಭವದ ರಸಚಿತ್ರವನ್ನು ಬಣ್ಣಿಸಿದುದರಿಂದ,

ಸ್ಮರತತ್ತ್ವವನ್ನು ಗೆದ್ದು ಜಿನತತ್ತ್ವವು ಮೆರೆವಂದಿನಿಂದ; ಹಾಡಿದ್ದ ಹಾಡನ್ನೇ ಜನಮನದಲ್ಲಿ ಮೂಡಿಸಲು ಮೊಳೆಯಿಸಲು, ಚಿಗಿತು ಹೂತು ಕಾತು ಹಣ್ಣು ಪಡೆಯಲೆಂದು ತಮ್ಮ ತಮ್ಮ ಅನುಭವದ ಶಕ್ತಿಯಂತೆ ಆನಂದಗೀತವನ್ನು ಕವಿಗಳು ತಮ್ಮ ವಾಣಿಯಲ್ಲಿ ನುಡಿಯಿಸುತ್ತಿದ್ದಾರೆ. ಮಲ್ಲಿನಾಥನ ವಿಷಯವಾದರೂ ಇದೇ ಚಿರಂತನ ಕಾವ್ಯವನ್ನು. ಜಿನಾನುಭವನ್ನು ಅನುಭವಿಕ ಗುರುವಿನಿಂದ ಕೇಳಿ, ಸ್ವಾನುಭವದರ್ಪಣದಲ್ಲಿ ಅದರ ಪ್ರತಿಬಿಂಬವನ್ನು ಕಂಡು ಬಣ್ಣಿಸುವದೇ ಮಹಾಕಾವ್ಯ. ಕನ್ನಡಸಾಹಿತ್ಯಚಕ್ರದ ಶ್ವೇತಛತ್ರದಂತಿರುವ ವಚನಸಾಮ್ರಾಜ್ಯವಾದರೂ ಮಹಾನುಭಾವ ಸದ್ಗೋಷ್ಠಿಯ ಪೀಠದಲ್ಲಿ ಸುಪ್ರತಿಷ್ಠಿತವಾಗಿದೆ. ಮಹಾನುಭಾವವನ್ನು ಪಡೆಯುವದು, ಅದನ್ನು ನುಡಿಯುವದು ಕನ್ನಡಸಾರಸ್ವತದ ಜೀವಜೀವಾಳವಾಗಿದೆ. 'ಜಿತ ಕಂದರ್ಪವೆನಿಪ್ಪ ಶಾಂತರಸ'ವನ್ನಂತೂ ಕಾವ್ಯದಲ್ಲಿ ನೆಲೆಗೊಳಿಸಿದವರು ಜೈನರೇ ಆಗಿರಬೇಕು. ಅಲಂಕಾರಶಾಸ್ತ್ರಜ್ಞರಲ್ಲಿ ಶಾಂತರಸದ ಲಕ್ಷಣಗಳನ್ನು ಸುಸ್ಪಷ್ಟವಾಗಿ ಹೇಳುವವರಲ್ಲಿ ಮೊದಲಿಗನು ಕಾವ್ಯಾಲಂಕಾರವನ್ನು ಬರೆದ ರುದ್ರಟನೇ ಅಹುದು. ಈ ರುದ್ರಟನು ಕವಿಚರಿತೆಕಾರರು ತರ್ಕಿಸುವಂತೆ ಕನ್ನರನ ಕಾಲಕ್ಕೆ (೯೩೯–೯೬೮) ಜೀವಿಸಿದ್ದ ಮಾದಿರಾಜನ ಸಾನೂಸಿಗ ಮನೆತನದ ಮೂಲಪುರುಷನೇ ಆಗಿದ್ದಲ್ಲಿ (ಕವಿಚರಿತೆ ೧ ಭಾಗ, ದ್ವಿತೀಯ ಮುದ್ರಣ, ಪುಟ ೩೪೭) ದಕ್ಷಿಣ ದಿಗಂಬರಜೈನಪರಂಪರೆಯನ್ನು ಬಲ್ಲವನಾದುದರಿಂದಲೇ ಶಾಂತರಸದ ಲಕ್ಷಣವನ್ನು

ಸಮ್ಯಗ್ಜ್ಞಾನಪ್ರಕೃತಿಃ ವಿಗತೇಚ್ಛನಾಯಕೋ ಭವತಿ ।
ಸಮ್ಯಗ್ಜ್ಞಾನಂ ತಮಸೋರಾಗಸ್ಯಚಾಪಗಮಾತ್ ॥ ೧೫ ॥
ಜನ್ಮಜರಾಮರಣಾದಿತ್ರಾಸೋ ವೈರಸ್ಯವಾಸನಾವಿಷಯೇ ॥
ಸುಖದುಃಖಯೋರನಿಚ್ಛಾದ್ವೇಷಾವಿತಿ ತತ್ರ ಜಾಯಂತೇ ॥ ೧೬ ॥

ಕಾವ್ಯಾಲಂಕಾರ ೧೬ ಅಧ್ಯಾಯ

ಹೀಗೆ ವಿವರವಾಗಿ ಹೇಳಿದ್ದಾನೆ ಎನ್ನಬೇಕಾಗುವದು. ನಾಗ-ವರ್ಮನು ಕಾವ್ಯಾವಲೋಕನದ ರಸಪ್ರಕರಣದಲ್ಲಿ

ಸಮಭಾವಪ್ರಭವಂ ಶಾಂ।
ತಮಕ್ಕುಮಂತಾಸಮುತ್ಸವಮುಂ ವರ್ತಿಸುಗುಂ।
ಸಮನಿಸಿ ಸಮ್ಯಗ್ಜ್ಞಾನಂ।
ತಮುಮುಂ ರಾಗಮುಮನಲೆದು ತೊಲಗಿಸೆ ಮನದಿಂ ॥ಲ೩ಲ
ಸೂತ್ರ ೨೦೫

ಸಮ್ಯಗ್ಜ್ಞಾನದಿಂದಾಗುವ ಸಮಭಾವವೇ ಶಾಂತಕ್ಕೆ ಸ್ಥಾಯಿ ಯೆಂದು ಹೇಳುವನು. ನೃಪತುಂಗನ ಕವಿರಾಜಮಾರ್ಗದಲ್ಲಿ 'ವಿಗತ ವಿಕಾರ'ತ್ವವು ಶಾಂತದ ಲಕ್ಷಣದಲ್ಲಿ ಪರಿಗಣಿಸಲಾಗಿದೆ. ಶಾಂತ ವನ್ನು ಸಾಹಿತ್ಯಿಕರಸವೆಂದು ಒಪ್ಪಿಕೊಳ್ಳಬಹುದೋ ಇಲ್ಲವೋ ಎಂದು ಸಂಸ್ಕೃತ ಲಾಕ್ಷಣಿಕರು ಗುದ್ದಾಡುತ್ತಿರುವಾಗ ನಿಶ್ಚಿತಬುದ್ಧಿಯವ ರಾಗಿ ಕನ್ನಡ ಕವಿಗಳು ಶಾಂತರಸಕ್ಕೆ ನೋಂತ ಕಾವ್ಯಗಳನ್ನು ಮಾಲೆ ಮಾಲೆಯಾಗಿ ಬರೆದಿದ್ದರ ರಹಸ್ಯವಾದರೂ ಶಾಂತರಸವು ಜಿನಸಮಯ ಪ್ರಣೀತವೆಂಬ ಮಾತಿನಲ್ಲಿದೆ. ಸ್ವತಃ ನಾಗಚಂದ್ರನು ಮಾರ್ಮಿಕ ನಾದ ಲಾಕ್ಷಣಿಕನಾಗಿದ್ದನೆಂಬುದು ಅಖಿಲ ಭಾವಗಳಿಗೂ ರಸತ್ವಸಿದ್ಧಿ ಯಿದೆ ಎಂಬುದನ್ನು ಸೂಚಿಸುವ ಅವನ ರಸಭಾವವಾದವದಾತಿರಳಿ ಮಲ್ಲಿನಾಥಪುರಾಣದ ತ್ರಯೋದಶಾಶ್ವಾಸದೊಳಗಿನ ರಸವಿಮರ್ಶೆ ಯಿರಲಿ, ರಾಮಚಂದ್ರಚರಿತಪುರಾಣದ

ಪರಮಬ್ರಹ್ಮಶರೀರವೃಷ್ಟಿ, ಜನಿತಾಂತರ್ದೃಷ್ಟಿ,ಕೈವಲ್ಯಬೋ।
ಧರಮಾಮೌಕ್ತಿಕಹಾರಯಷ್ಟಿ, ಕವಿತಾವಲ್ಲೀಸುಧಾವೃಷ್ಟಿ, ಸ॥
ರ್ವರಸೋತ್ಪಾದನವೀನಸೃಷ್ಟಿ, ಬುಧಹರ್ಷಾಕೃಷ್ಟಿ ಸರ್ವಾಂಗ
ಸುಂ।

ದರಿ ವಿದ್ಯಾಸಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀ
ರಂಗದೊಳ್ ॥ ೬ ॥

ಈಯೊಂದೆ ಪದ್ಯವು ಸಾಕು. ಜೈನಪುರಾಣಕವಿಗಳ ರಸವಿಮರ್ಶೆಯು ಗಾಢವಾಗಿತ್ತು. ಪೊನ್ನನು

ಜಿನತತ್ತ್ವಂ ಸ್ಮರತತ್ತ್ವವೆಂಬಿವೆರಡುಂ ದೂರಸ್ಥವೆಂತೆನ್ನಲಾ।
ಜಿನತತ್ತ್ವಂ ಗತರಾಗಮಾಮದನತತ್ತ್ವಂ ರಾಗಸಂಪೂರ್ಣಂ
(೧-೧೬) ಶಾಂತಿಪುರಾಣ

ಎಂದು ಎರಡು ಮಾತಿನಲ್ಲಿಯೆ ದೊಡ್ಡದೊಂದು ಪ್ರಮೇಯವನ್ನಿಟ್ಟರೆ ನಾಗಚಂದ್ರನು ಕಾವ್ಯಕೃತಿಯು ರಾಗದ್ವೇಷಗಳನ್ನು ಹುಟ್ಟಿಸಲೇ ಬಾರದು,

ರಾಗದ್ವೇಷನಿಬಂಧಮಪ್ಪ ಕೃತಿಯುಂ ನಿರ್ಬಂಧದಿಂ ಬಂಧಮಿಂ।
ಬಾಗರ್ಥಂ ಪೊಸತಾಗೆ ಪೇಳ್ದಖಿಲಮುಂ ರಾಗಾವಿಲಂ ಮಾಳ್ಪ ವಿ॥
ದ್ಯಾಗರ್ವಗ್ರಹಪೀಡಿತರ್ ಸ್ವಪರಬಾಧಾಹೇತುವಂ ದುಸ್ತರೋ।
ದ್ಯೋಗಕ್ಲೇಶಿತರಾಗಿ ಬಿತ್ತಿಬೆಳೆವಂತಕ್ಕುಂ ವಿಷೋದ್ಯಾನಮುಂ॥
ರಾ. ಚ. ಪು. ೧-೩೪

ಅದು ವಿಷದ ಕೂಡಾಡಿದಂತೆ ಎಂದು ಹೇಳುವನಲ್ಲದೆ,

'ಶಾಂತಮೆ ಪುಣ್ಯಹೇತುವಘಹೇತುಗಳನ್ಯರಸಂಗಳ್'
ಮಲ್ಲಿ (೧-೪೯)

ಎಂದು ಸ್ಪಷ್ಟವಾಗಿಯೆ ಸಾರುವನು.

ಸೌಧರ್ಮೇಂದ್ರನು ಜಿನೇಶ್ವರನ ಸ್ತುತಿಮಾಡಿದಂತೆ ಮಹಾಕಾವ್ಯಗಳ ಬಗ್ಗೆಯೂ ನಮಗೆ ಹೇಳಲು ಬಂದರೆ ಅದೇ ಆ ಕಾವ್ಯದ ಮಹತ್ವ—ಮಾಹಾತ್ಮ್ಯ.

ಮದನಪತತ್ರಿ ನಿನ್ನ ದೆಸೆಗಾಣದು, ಮೋಹಮಹಾಹಿ ನಿನ್ನನ।

ಣ್ಮಿದು, ಕಲುಷಾನಳಂ ನಿಜದಯಾರಸದಿಂ ಮುಗಿಯಾಯ್ತು,
**ಪಾಪವಿ ||**

**ಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳವಾಯ್ತೆನೆ** ಪೆಣ್ಣಾ
ಮಣ್ಣಾ ವೋ।

ಹಪ **ಪರಮಾತ್ಮರತ್ತಿರಲಿ** ನೀನೆ ಜಗತ್ಸುತನ್ಪೈ ಜಿನೇಶ್ವರಾ ||
ನೋಟದ ತೀಟದಾಲಿಸುವ ಸೇವಿಪ ವಾಸನೆಗೊಳ್ವ ಸೌಖ್ಯಮುಂ।
ಮಾಟದ ಸೌಖ್ಯಮೆಂದು ಪೆಸಗೊಳ್ಳದೆ ನಿನ್ನೊಳಭೇದಮಾದ
ಕೊಂ||

ಡಾಟದನಂತಸೌಖ್ಯಮನೆ ಮುಚ್ಚಿದಮುಚ್ಚಗೆಯೊಳ್ ತೊಡಚ್ಚ
**ಮಾ**

**ರಾಟದೆ ನಿನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್**
ಜಿನೇಶ್ವರಾ ||

ಕಾವ್ಯದಿಂದ ನಾವು ಅಪೇಕ್ಷಿಸುವದು ರಾಗದ್ವೇಷಪ್ರಚೋದನವಲ್ಲ; ಅನಂತಸೌಖ್ಯದ ನೆಲೆಯಾದ **'ದರ್ಶನವಿಶುದ್ಧಿ'**; ಕವಿಗಳಿಂದ ನಾವು ಬೇಡುವದು ಇಹಲೋಕದ ಚಕ್ರವರ್ತಿಗಳ ಮಾನುಷಾನಂದದ ಬಣ್ಣನೆಯಾಗಲಿ, ಪರಲೋಕದ ಇಂದ್ರರ ದೇವಾನಂದದ ಕೀರ್ತನೆ ಯಾಗಲಿ ಅಲ್ಲ. ಅಲ್ಪವಾದುದರಲ್ಲಿ ಸುಖವಿಲ್ಲ. ಆತ್ಯಂತಿಕ ಸುಖದ ಸೀಮೆಯು ಸೀಮಾರೇಷೆಯನ್ನು ರೇಖಿಸುವ ಸೀಮಾಪುರುಷರ ಜೀವ ನದ ರಸಸಮುದ್ರದ ತರತ್ತರಂಗಗಳನ್ನು ನಮ್ಮ ಎದೆಯನ್ನು ಅಲ್ಲಾ ಡಿಸುವಂತೆ, ನೀರುಮಾಡುವಂತೆ, ತಲ್ಲೀನಮಾಡುವಂತೆ ಎಬ್ಬಿಸುವ ಪ್ರತಿಭಾಪ್ರಭಂಜನರು ಮಹಾಕವಿಗಳು. ಆ ಸಾಮರ್ಥ್ಯದ ಝಳುಕು ನಾಗಚಂದ್ರನಲ್ಲಿತ್ತು. ಪಂಪನು ದೇವೇಂದ್ರನಂದಿಚರಿತವನ್ನು ಕಂಡು ದೇವೇಂದ್ರವಂದ್ಯಪರಮಜಿನನ ಚರಿತವನ್ನು ಹೇಳಲಾಪನಾದನು. ಶಾಂತಿನಾಥನ ಚರಿತ್ರೆ ಬರೆಯುವದಕ್ಕೆ 'ಜಿನಚಂದ್ರಂ ಮುನಿಚಂದ್ರನೆ

ಶಾಂ। ತಿನಾಥಸ್ಯೇ ಶಾಂತಿನಾಥನಾ ಜಿನಚಂದ್ರಃ' ಎಂಬುವಂತೆ ಒಬ್ಬ ಗುರುವಿನ ಆಧಾರ ದೊರೆಯಿತು. ಅಜಿತಸೇನಾಚಾರ್ಯರ ಶಿಷ್ಯನಾದ ರನ್ನನು ಅಜಿತಜಿನಚರಿತ್ರಕ್ಕೆ ಕೈಯಿಕ್ಕಿದುದೂ ಸಹಜವೇ ಆಗಿದೆ. ನಾಗಚಂದ್ರನಿಗೂ ಬಾಲಚಂದ್ರಗುರುವಿನಲ್ಲಿ ಮಹಾವಸ್ತುವು ದೊರೆಯಿತು. ಬಾಲಚಂದ್ರಗುರುವನ್ನು ಹೊಗಳುವ 'ಪುರಿದಂತಾದುವು ಪೂವಿನಂಬು' ಹಾಗು 'ಅರವಿಂದಸ್ಮೇರವಾಸ್ಯಂ' ಎಂಬೆರಡು ಪದ್ಯಗಳು ಮಲ್ಲಿಜಿನನ ಎರಡು ಜನ್ಮದ ಸಾರಸರ್ವಸ್ವವನ್ನೆ ವರ್ಣಿಸುವವು. ಕಾವ್ಯಫಲದಿಂದ ಉಪದೇಶಗೈಯ್ದ ಕವಿಜ್ಯೇಷ್ಠರ ಮೇಲುಪಂಕ್ತಿಯನ್ನು ನಾಗಚಂದ್ರನು ತನ್ನ ಕಣ್ಮುಂದಿಟ್ಟುಕೊಂಡಿದ್ದರೂ, ಸಮಯವಿರೋಧವಾಗದಂತೆ ಜಾಗರೂಕನಾಗಿ ಕಾವ್ಯವನ್ನು ಸಾಗಿಸಿದ್ದರೂ ಇಡಿ ಮಲ್ಲಿನಾಥಪುರಾಣವನ್ನು ನಾಗ-ಚಂದ್ರನು ಕವಿಯ ರಸಕೂರ್ಚದಿಂದಲೆ ಚಿತ್ರಿಸಿದ್ದಾನೆ.

ಪದ್ಯಗಳನ್ನು ಯತ್ನದಿಂದ ಹೊಸೆದ ಸಂಶಯವು ರಾಮಚಂದ್ರಚರಿತ ಪುರಾಣದಲ್ಲಿರಲಿ, ಮಲ್ಲಿನಾಥದಲ್ಲಿಯೂ ಬರುವದಿಲ್ಲ.

ಕಲ್ಲೋಲಸರ್ಗಂ ಕೊಯ್ದೊಣಗಿದ ।
ಪುಲ್ಲೆಲ್ಲಂ ಚಿಗುರ್ಗುವಡವಿಗಡೆದ ಮರಂಗಳ್ ।
ಪಲ್ಲವಿಕುಮುಮವು ಕವಿಗಜ ।
ಮಲ್ಲನ ಪಂಪುಗನ ಕಾವ್ಯರಸತಾಪ್ಯೃತದಿಂ ॥

ಎಂದು ಕಂತಿಯು ಹಾಡಿಕೊಂಡು ಅತ್ತುದು ಸಾರ್ಥಕವಾಗಿಯೆ ಇರುವಂತೆ ಮಲ್ಲಿನಾಥವನ್ನೋದಿದವರಿಗೆ ಅನಿಸದಿರದು.

### ೩ ವಸ್ತುರಚನೆಯ ವಾಸ್ತುಸೌಂದರ್ಯ

ಕವಿಯು ಏಕಜನ್ಮಚರಿತ್ರೆಯನ್ನೆ ವರ್ಣಿಸಲಿ, ಅನೇಕಜನ್ಮಚರಿತ್ರೆಯನ್ನೆ ವರ್ಣಿಸಲಿ ಆದರಲ್ಲೊಂದು ಕ್ರಮವನ್ನು ಕಂಡು ತೋರಿಸಬಲ್ಲನಾದರೆ ಅವನ ಪ್ರತಿಭೆಗೆ ಅದೆ ಭೂಷಣ. ಮಲ್ಲಿನಾಥನ

ಎರಡು ಜನ್ಮದ ಚರಿತ್ರೆಯೂ ಒಂದು ಮಹಾಜನ್ಮದ ಪೂರ್ವೋತ್ತರ ಭಾಗಗಳಾಗುವಂತೆ ನಾಗಚಂದ್ರನು ಜಾಣ್ಮೆಯಿಂದ ಸಂಧಿಸಿರುವನು. ಉತ್ತರಜನ್ಮದ ಫಲದ ಬೀಜಗಳು ಪೂರ್ವಜನ್ಮದಲ್ಲಿ ಅಲ್ಲಲ್ಲಿ ಹುದುಗಿ ಹೊಳೆಯುವಂತೆ ವಿವರಗಳನ್ನು ಅನುಗೊಳಿಸಿರುವನು. ವರ್ಣನೆಯು ಕಥಾವಸ್ತುವಿಗೆ ಉಜ್ವಲವಾದ ಪರಭಾಗವಾಗುವಂತೆ ಜೋಡಿಸಿರುವನು. ಈ ಬಗೆಯ ವಸ್ತುರಚನಾಕೌಶಲ್ಯವು ವಾಸ್ತುಶಿಲ್ಪದ ತವರು ಮನೆಯಾದ ಕನ್ನಡಕ್ಕೆ ಹೊಸದಲ್ಲ. ಆದರಲ್ಲಿಯೂ ನಾಗಚಂದ್ರನ ಕೈವಾಡದ ಸೊಗಸೇ ಬೇರೆ. ನಾಗಚಂದ್ರನು ಪಂಪಪ್ರೋಕ್ತವಾದ ಎಂಟು ಕಥಾಂಗಗಳನ್ನೆ ಕಣ್ಣಿದಿರಿಟ್ಟುಕೊಂಡಿರುವನು.

(೧) ಭುವನಂ (೨) ದೇಶಂ (೩) ಪುರಂ (೪) ರಾಜವೃತ್ತಕಂ।
(೫) ಅರ್ಹದ್ವಿಭವಂ (೬) ಚತುರ್ಗತಿ (೭) ತಪೋಮಾರ್ಗಂ
(೮) ಫಳಂ—ಮಲ್ಲಿ (೧-೫೪)

ಜನ್ನನು ಮುನಿಪ್ರೋಕ್ತ ಪುರಾಣಪದ್ಧತಿಗೆ (೧-೫-೬-೭-೮) ಐದ್ದುಂಗಗಳೆಂದೂ ಕವಿಪ್ರೋಕ್ತ ಕಾವ್ಯನಿಬಂಧಕ್ಕೆ ಎಂಟು ಅಂಗಗಳೆಂದೂ ವಿವೇಕಿಸಿ ಹೇಳುವನು. ನಾಗಚಂದ್ರನು ಕವಿ. ಅವನು ಅನುಸರಿಸುವದು ಕವಿಮಾರ್ಗ. ಅದಲ್ಲದೆ ಕಾವ್ಯಾಂಗಗಳಿಗೆ ಪ್ರಾಶಸ್ತ್ಯವೂ ಹೆಚ್ಚು. ಮಲ್ಲಿನಾಥದ ೨೦೩೧ ಗದ್ಯಪದ್ಯಗಳಲ್ಲಿ ದೇಶ-ಪುರ-ರಾಜವೃತ್ತ ವರ್ಣನೆಗೆ ಸುಮಾರು ೧೩೫೦ ಗದ್ಯಪದ್ಯಗಳು ಮೀಸಲಾಗಿವೆ. ಮನುಷ್ಯಸಾಮಾನ್ಯರಿಗೆ ಪರಿಚಿತವಾದ ಜೀವನವೇ ಅದು. ಅದನ್ನೆ ಕವಿಯು ರಮ್ಯವಾಗಿ ವಿಸ್ತಾರವಾಗಿ ಚಮತ್ಕಾರವಾಗಿ ಚಿತ್ರಿಸಿದ್ದಾನೆ. ಮಾನುಷಾನಂದದ ಪರಮಾವಧಿಯನ್ನು ಎತ್ತಿ ತೋರಿಸಿದ್ದಾನೆ. ಧೀರ ಜೀವನಕ್ಕೆ ಅದು ಹೇಗೆ ಅಲ್ಪವಾಗಿ ತೋರುವದೆಂಬುದನ್ನು ಚೆನ್ನಾಗಿ ಮೂಡಿಸಿದ್ದಾನೆ. ಜಿನಪದವಿಯು ಅದಕ್ಕೂ ಹೇಗೆ ಮಿಗಿಲಾಗಿದೆಯೆಂಬದನ್ನು ಹೊಳೆಸಿದ್ದಾನೆ. ಇದೆಲ್ಲವನ್ನೂ

ಕಾವ್ಯಾಂಗಗಳಲ್ಲಿ ಸ್ಪಷ್ಟತೆಯನ್ನು, ಕ್ರಮವನ್ನು, ಪ್ರಮಾಣಬದ್ಧತೆಯನ್ನು ಇಟ್ಟು! ಇದೇ ಕೌಶಲ; ಇದೇ ರೂಪನಿರ್ಮಿತಿ; —ಕಬ್ಬದಿಟ್ಟಳ.

ನಾಗಚಂದ್ರನ ಅರ್ಥಾಂತರನ್ಯಾಸ ಪ್ರೀತಿ, ಹಯಲಕ್ಷಣಜ್ಞತೆ, ಶಿಲ್ಪಸೌಂದರ್ಯದೃಷ್ಟಿ— ಇವೆಲ್ಲವೂ ಹೊಗಳತಕ್ಕ ಗುಣಗಳೇ ಆಗಿದ್ದರೂ ಸಮಗ್ರ ವಸ್ತುವಿನ ಸಮ್ಯಕ್‌ಸೌಂದರ್ಯದಲ್ಲಿ ದೃಷ್ಟಿಯಿಟ್ಟು ಪ್ರತ್ಯಂಗಗಳನ್ನೂ ಅನುಗೊಳಿಸುವ ಚಾತುರ್ಯವು ಮಲ್ಲಿನಾಥಪುರಾಣದಲ್ಲಿಯೂ ಕಾಣುವದು. ಅದರ ಸೌಭಾಗ್ಯೋನ್ನತಿಯನ್ನೇ ಇಲ್ಲಿ ವಿಶದಗೊಳಿಸಬೇಕಾಗಿದೆ. ಮೂಲದಲ್ಲಿ ಕಿರಿದಾದ ವಸ್ತುವಿಗೆ ಹುದುಹಾಕಿ ಅದರ ಅಷ್ಟಾಂಗದ ಇಟ್ಟಳವು ಹೇಗಿದೆ ಅದನ್ನು ಬಿಡಿಸಿ ನೋಡಬೇಕಾಗಿದೆ. ವಸ್ತುವಿನ ತಲವಿನ್ಯಾಸವು ಹೀಗಿದೆ:—೧ನೆಯ ಆಶ್ವಾಸ ನಾಂದಿಪದ್ಯ ೧, ಜಿನಪತಿ ಮುನಿಪತಿ ವರ್ಣನ ೨೧, ಕವೀಶ್ವರ ಗುಣವರ್ಣನ ೪೪, ಕಾವ್ಯಪೀಠಿಕೆ ೫೪; ಆಶ್ವಾಸದ ಕೊನೆಯವರೆಗೆ ೬೯ ಭುವನವರ್ಣನೆ (ಮೊದಲನೆ ಅಂಗ). ೨ನೆಯ ಆಶ್ವಾಸ ೩೦ ವರೆಗೆ ದೇಶವರ್ಣನೆ (ಎರಡನೆಯ ಅಂಗ). ಆಶ್ವಾಸದ ಕೊನೆಯವರೆಗೆ ಪುರವರ್ಣನೆ (ಮೂರನೆಯ ಅಂಗ). ೩-೪-೫-೬-೭-೮-೯-೧೦-೧೧ನೆಯ ೬೯ ಪದ್ಯದ ವರೆಗೆ ಮಲ್ಲಿಜಿನನ ಪೂರ್ವಜನ್ಮದ ಬಣ್ಣನೆ ಅಹಮಿಂದ್ರಸ್ಥಿತಿಯ ಪ್ರರ್ಯಂತ. ಸುಮಾರು ೧೨೭೦ ಗದ್ಯಪದ್ಯಗಳು ಶುದ್ಧಕಾವ್ಯಾಂಗವಾದ ರಾಜವೃತ್ತಕ್ಕೆ ಕೊಡಲಾಗಿವೆ. ಇವಕ್ಕೆ ಎರಡನೆಯ ಜನ್ಮದ ಅರ್ಹದ್ವಿಭವವನ್ನು ೫ನೆಯ ಅಂದರೆ ೧೧ನೆಯ ಆಶ್ವಾಸಪೂರ್ಣ, ೧೨, ೧೩ನೆಯ ಆಶ್ವಾಸದ ೯೨ನೆಯ ಪದ್ಯದವರೆಗೆ ಸುಮಾರು ೩೪೦ ಗದ್ಯಪದ್ಯಭಾಗಗಳನ್ನು ಕೂಡಿಸಿದರೆ ಇಡಿ ಕಾವ್ಯದೊಳಗಿನ ೨೦೩೧ರಲ್ಲಿ ೧೬೦೦ ಗದ್ಯಪದ್ಯಗಳಲ್ಲಿ ಕಾವ್ಯದ ಗರ್ಭಗುಡಿಯ ರಚನೆಯಾಗಿದೆ— ಇದು ಇರಬೇಕಾದುದೆ. ೧೩ನೆಯ ಆಶ್ವಾಸದ

೯೨–೧೫೬ ಪೂರ್ಣ ಚತುರ್ಗತಿ ಸ್ವಭಾವ (೭ನೆಯ ಅಂಗ); ೧೩ನೆಯ ಆಶ್ವಾಸಪೂರ್ಣ ೧೪ರ ೧೧೩ ಪದ್ಯದವರೆಗೆ ತಪೋಮಾರ್ಗ (೭ನೆಯ ಅಂಗ). ಮುಂದೆ ೨೯೦ ಪೂರ್ವಫಳ (೮ನೆಯ ಅಂಗ). ೨೯೭ ಕಾವ್ಯೋಪಸಂಹಾರ, ೨೯೮ ಮಂಗಳ. ರನ್ನನು ತನ್ನ ಕಾವ್ಯದ ತಲ ವಿನ್ಯಾಸದ ಬಗೆಗೆ ಹೀಗೆ ಬರೆಯುವನು:—

ಸುರಲೋಕಾವತರೋತ್ಸವಂ ಪರಿಕೃತಂ ಜನ್ಮಾಭಿಷೇಕೋತ್ಸವಂ।
ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯ
ಬೋಧೋತ್ಸವಂ ॥
ಪರಿನಿರ್ವಾಣಮಹೋತ್ಸವಂ ಜಿನಮಹಾಕಲ್ಯಾಣಮಯ್ದುಂ ಸವಿ।
ಸ್ತರಿಂದಿದಿರ್ಪುವು ವರ್ಣಕಂಗಳಿವರಿಂ ಭವ್ಯಾಂಗಮೇಸೊಪ್ಪದೇ ॥

ಇದರ ರೀತಿ ಬೇರೆ ಮಲ್ಲಿನಾಥದ ರೀತಿ ಬೇರೆ.

ಮಲ್ಲಿನಾಥಮಹಾಕಾವ್ಯದ ಅವಯವ ವಿನ್ಯಾಸವನ್ನೆ ನೋಡುವದಾದರೆ— ಚಿತ್ತಜಚಿತ್ರಶಾಲೆಯಂತಿರುವ ಜಂಬುದ್ವೀಪದಲ್ಲಿ, ಅಂಗೋದ್ಭವಜಯವನಿತಾಜನ್ಮಗೇಹವಾದ ವಿದೇಹವು

ಮಾವಿನ ಜೊಂಪಮಂ ಲತೆಯಬಳ್ಳಿ, ಸರೋವರಮಂ ಪೊಸಳ್ದ
ಪೊಂ।
ದಾವರೆವಳ್ಳಿ, ಪೂಗವನಮಂ ಪೊವರಿಂದೆಲೆವಳ್ಳಿ, ಪುಷ್ಪವ ॥
ಲ್ಲೀವನಮಂ ಲತಾಂಗಿಯರಪಾಂಗದ ಮಿಂಚಿನಬಳ್ಳಿ, ಸುತ್ತಿ
ಶೋ।
ಭಾವಹಮಾರ್ಗಮಾವಿಷಯಮೀವುದುರಾಗದ ಬಳ್ಳಿವಳ್ಳಿಯಂ ॥

ಎನ್ನುವಂತಿತ್ತು. ಇಂತು ನಯನಾನಂದವಿಷಯಮಾದ ವಿಷಯ ವಿಲಾಸಿನೀಮಧ್ಯನಾಭಿಯುಂ ಸೌಂದರ್ಯಸನಾಭಿಯುಮೆನಿಸಿ ವಿಷಯಸುಖಾಸ್ಪದವಾದ ವೀತಶೋಕಪುರವು ಸ್ಮರರಾಜನ ರಾಜ

ಧಾನಿಯಂತಿತ್ತು. ಅಲ್ಲಿಯ ಗಾಳಿಯು ಕೂಡ ಕಾಮೋದ್ದೀಪಕವಾಗಿತ್ತು.

ಗಣಿಕಾರತ್ಯಂತಸುಪ್ತಿಸ್ಖಲನ ಚತುರನ್, ಅಂಭೋಜಕಿಂಜಲ್ಕ ಸಂಚಾ।
ರಣಶೀಲನ್, ಪುಷ್ಪವಲ್ಲೀನಟನಪಟುನಟನ್, ಸಂಚರಚ್ಚಂಚರೀಕ ॥
ಕ್ವಣನಚ್ಛಾಯಾಸಂಗ ಚಿತ್ತೋದ್ಭವಭುವನ ಜಯೋತ್ಪಾದನ ಪ್ರೌಢಸೇನಾ ।
ಗ್ರಣಿ, ಚೇತಃಪ್ರೀತಿಯಂ ಪೆರ್ಚಿಸುವದು ಪವನಸ್ವೈರಚಾರನ್ ಸವಿಹಾರನ್ ॥

ಅಲ್ಲಿಯ ಹೂದೋಟವು ಹಾಗೆಯೆ.

ನನೆಯಂಬಿನ ತಾಯ್ವನೆಯೆನೆ।
ನನೆವಿಲ್ಲಾಗರಮಿದೆನೆ, ಮನೋಜನ ಸಮ್ಮೋ ॥
ಹನವಿದ್ಯಾದೇವತೆಯರ।
ಮನೆಯೆನೆ, ಪೂದೋಂಟಮೊಪ್ಪುಗುಂ ಪೊರಪೊಳಲೊಳ್ ॥

ಅಂದಮೇಲೆ ಅಲ್ಲಿಯ ವಿಲಾಸಿನಿಯರ ದರ್ಪವನ್ನು ಕೇಳುವದೇನು?

ಆವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊತ್ತಾಳ್ವು।
ದಾವಂ ದೇವವ್ರತಖ್ಯಾತಿಯನವನನವಲ್ಮಾಳ್ಪುದೆಂದಾ ಪುರಸ್ತ್ರೀ॥
ಭೂವಿಕ್ಷೇಪಕ್ಕೆ ಸೇನಾಪತಿ ಪದವಿಯನಿತ್ತಂ ಮನೋಜಾತ ನಾಟಂ ।
**ದಾವೇಶ್ಯಾವಾಟದೊಳ್ ಧೂರ್ಜಟಿಯನೊಸಲಕಣ್ಣಿಂ ಸ್ಮರಂ ನಂದೆಪೊಯ್ದಂ ॥**

ಅಲ್ಲಿಯ ಮಾಲೆಗಾತಿಯರೂ ನನೆಯಂಬುಗಳ್ಗೆ ಬೆರಲೆತ್ತುವರು. ಇಂಥ ಪುರದ ಅರಮನೆ ಹೇಗಿರಬೇಕು?

ಕರು ಕರುವಿಂಗೆ ಕಣ್ಣೆರವಿ, ಕಲ್ಪಿಸದೋಜೆಗೆ ನಚ್ಚಿನಚ್ಚು, ಕಂ।
ಡರಣೆಗೆ ಮಂಡಣಂ, ಮರವೆಸಕ್ಕೆರೆವಟ್ಟೆ+ಎರಕಕ್ಕೆ ಜೌವಸಂ॥
ಪರಿಣತಿ ಚಿತ್ರವಿದ್ಯೆಗೆಸಲಲ್ಲದೆ—ಚಿತ್ರಿಸಿಕೊಂಡು ಬೇರೆ ಬಿ।
ತ್ತರಿಪುದು ಮೊಗ್ಗೆ ಸಪ್ತತಳರಮ್ಯಮನಾ ಧರಣೀಶಹರ್ಮ್ಯಮಂ॥

ಎಲ್ಲ ಶಿಲ್ಪಶಾಸ್ತ್ರಾಭ್ಯಾಸಕ್ಕೆ ಅದು ಮಾತೃಕೆಯೆಂತಿತ್ತು. ಅಲ್ಲಿಯ ಕುಸುರಿವೆಸವು ಮಯನಿಗೂ ವಿಸ್ಮಯವನ್ನುಂಟುಮಾಡುವಂತಿತ್ತು. ಅಲ್ಲಿಯ ಅರಸನು ಆ ನಾಡಿಗು ಬೀಡಿಗು ತಕ್ಕಂತೆ ಮಂತ್ರಶಕ್ತಿಗೆ ಜನ್ಮಭೂಮಿಯಾಗಿ, ಶೇಷನು ಧರೆಯನ್ನು ತಾಳಿದ್ದುದು ಸುಳ್ಳು, ಇವನ ಪ್ರಚಂಡ ಭುಜದಂಡವೇ ಅದನ್ನು ಎತ್ತಿಹಿಡಿದಿದೆ ಎಂಬಂತೆ ಶಿಕ್ಷೆಗೂ ರಕ್ಷೆಗೂ ಸಮರ್ಥನಾಗಿ,

ಬಿರುದಿನ ಬೀರರ ಪೆಸರ
ಕ್ಕರಮಂ ಪರನೃಪರ ಮೆಯ್ಯ ಪುಣ್ಗಲೆಗಳ್ ಪೋ।
ಲ್ತಿರೆ ತೋಳ್ವಲಕ್ಕೆ ಪಡೆದಂ
ವರಶಾಸನಮಂ ನರೇಂದ್ರಚೂಡಾರತ್ನಂ॥

ಎಂದಮೇಲೆ ಬೇರೆ ಶಿಲಾಶಾಸನವೇಕೆ? ಷೋಡಶರಾಜರಿಗೆ ಸರಿದೊರೆಯಾದ ಇವನನ್ನು ಲಕ್ಷ್ಮಿಯು ನೆಮ್ಮಿನಿಂತಳು; ಅದು ಸ್ವಭಾವವೇ ಆಗಿದೆ.

ಜಳವಂಭೋಬಿಂದು ಮುಕ್ತಾಫಲವೆನಿಸುವವೊಲ್ ಶುಕ್ತಿಕಾ ಸಂಗದಿಂ ಸಿ।
ಶ್ಚಳಧೈರ್ಯಾಲಂಬವಾಗಿರ್ದವನಿಪತಿಯ ಹೃತ್ಸಂಗದಿಂದಂ ತಟಿಚ್ಚಂ।
ಚಳೆಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಳಿದತಿಸ್ಥೈರ್ಯಮಂ ತಾಳ್ದಿದಳ್; ಕೇ
ವಳಮೇ ಸತ್ಸಂಗಮುತ್ಸಾರಿತಸಕಲಜನಸ್ವಾಂತದೋಷಾನು ಷಂಗಂ॥

ಅಖಿಲ ವಿಕಾರಗಳಿಗೆ ಉದ್ದೀಪಕವಾದ ಆ ದೇಶಕ್ಕೆ ಗಂಡನಾಗಿ ಧೀರನಾಗಿ ಆ ಅರಸನಿದ್ದನು. ಅವನು ವಿವೇಕಿಯಿದ್ದುದೆ ಮೂಲ ಕಾರಣ.

ಅವಿಚಲಮಪ್ಪ ಲಕ್ಷ್ಮಿ, ವಿವಿಧೋತ್ಕರಹೃದ್ಯಮೆನಿಪ್ಪ ವಿದ್ಯೆ, ಸೋ।
ಲ್ಪಪರಸುರಾಗಮುಂ ಪಡೆವ ರೂಪು, ಮನೋಹರಮಪ್ಪ
ಯೌವನಂ ॥

ಭುವನತಳಪ್ರಸಿದ್ಧಮೆನಿಪಸ್ಪಯುಮ್ ಆ ನೃಪನಲ್ಲಿ ತೋರಲಾ।
ರವು ಮದಮಂ, ವಿವೇಕಪರಿಪೂರ್ಣನನೇನಿವುವಿಾರಲಾರ್ಪುವೇ ॥

ಹೀಗೆ ಏಕೈಕಮಪ್ಯನರ್ಥಾಯ ಎನುವ ಎಲ್ಲ ಸಾಮಗ್ರಿಯೂ ಇತ್ತು. ಅದರಲ್ಲಿಯೂ ರೂಪವಂತೂ ಅಸದಳವಾದುದು.

ಲಲನಾಸ್ವರ್ಣಘನಸ್ತನೋಲ್ಲಸಿತಲಾವಣ್ಯಾಮೃತಸ್ನಾನಮಂ।
ಗಲಮಂ ಮುಖ್ಯಮನಂದೊಡರ್ಚಿ ನೃಪಸೌಂದರ್ಯಕ್ಕೆ
ಮುಂದಿಟ್ಟತ ॥

ನೃಲರ್ವಿಲ್ಲಂ ನಿಜರಾಜಚಿಹ್ನಸಹಿತಂ ಸಾಮ್ರಾಜ್ಯಮಂ ಮೂರು
ಸೂ ।

ಳ್ಬಲವಂದರ್ಪ್ಯಮನೆತ್ತಿಮನ್ಮಥ ನೃಪಂ ಕೊಟ್ಟಂ
ಮಹೋತ್ಸಾಹದಿಂ ॥

ಹೀಗಿದ್ದೂ **'ನಿರತಿಶಯ ವಿಷಯಸುಖ ಸುಧಾರಸಾಸ್ವಾದನಮೆ ತನಗೆ ವಿನೋದಮಾತ್ರಮಾಗೆ'**

ಎರಡುಂ ಪಕ್ಕದವಜ್ರವೇದಿಕೆಗಳಂ ಮೆಯ್ವರ್ಚಿಯುಂ ಕ್ಷೀರಸಾ।
ಗರಮುಲ್ಲಂಘಿಸಿದಂತೆ—ಪೆರ್ಚುವಡೆದುಂ **ಧರ್ಮಾರ್ಥಮುಂ**
**ಕಾಮುರಾ ॥**

**ಗರಸಂ ಮೀರದೆ** ಚಿತ್ತವೃತ್ತಿಗದು ಲೀಲಾಮಾತ್ರಮಾದಂತೆನಲ್।
ಧರಣೀನಾಥನವಕ್ರವಿಕ್ರಮಧನಂ ಭೂಜಕ್ರಮಂ ತಾಳ್ದಿದಂ ॥

ಇಂಥ ವಿಕ್ರಾಂತಕಂಠೀರವನಿಗೆ ವೀರಲಕ್ಷ್ಮಿಯಂತೆ ಲಕ್ಷ್ಮೀಮಹಾದೇವಿಯು ಅರಸಿಯಾಗಿದ್ದಳು. ಅವಳು ರೂಪದಲ್ಲಿ ರತಿಯ ರೂಪಮದವನ್ನು ಹಿಂಗಿಸುವಂತಿದ್ದಳು. ಅವಳು ಮಂಡನಶ್ರೀಗೆ ಮಂಡನದಂತೆ ಸರ್ವಾಂಗಸುಂದರಿಯಾಗಿದ್ದಳು. ಇಂಥ ದಂಪತಿಗಳನ್ನು ಜಗದಲ್ಲಿ ಕಾಣುವದೇ ಅಪರೂಪ—ಆದರೇನು !

ಕೃತವಿದ್ಯಂ ಬಿದಿಸೃಷ್ಟಿಯೊಳ್ ಸಮಸಮಾಕಾರಂ ಬೆಡಂಗಾಗೆ ದಂ।
ಪತಿಯಂ ಪುಟ್ಟಿಸೆ ಪೆಂಪುವೆತ್ತನೆನಿಪಾಶ್ಚರ್ಯ ಸೌಂದರ್ಯಮಂ।
ಸತಿಯುಂ ಭೂಪನುಮುಪ್ಪುಕೈಯ್ಯು ದೊರೆವೆತ್ತನ್ಯೋನ್ಯ
ಸಂಪ್ರೀತಿಯಿಂ।
ರತಿಯುಂ ಕಾಮನುಮೆಂಬಿನಂ ಸಲಿಸಿದರ್ ನಾನಾವಿನೋದಂ
ಗಳಂ ॥

ಅವರ ಅನ್ಯೋನ್ಯಸಂಪ್ರೀತಿಯು ಪಂಚೇಂದ್ರಿಯಪ್ರೀತಿಯನ್ನು ಪಡೆಯಿತು.

ವದನಾಸ್ವಾದದೊಳಾದಲಂಪನಮೃತಂ, ನೇತ್ರೋತ್ಪಳಾನಂದ
ನಂ।
ಪದಮುಂ ಚಂದ್ರಮನಂ ಇಂಪುವೆತ್ತನುಡಿಯುಂ ವಶ್ಯಾಕ್ಷರಂ,
ಸುಯ್ಯೊಳು ॥
ಣ್ಮಿದಕಂಪಂ ಮೃಗನಾಭಿ, ಸೋಂಕಿನೊದವಂ ಮಂದಾನಿಳಂ
ಕೊಟ್ಟವೊ।
ಲ್ಪದೆದೋರ್ರೊರ್ವರೊಳೊರ್ವರಂದು ಪಡೆದರ್ ಪಂಚೇಂದ್ರಿಯ
ಪ್ರೀತಿಯಂ ॥

ಇಂತು ಇಷ್ಟವಿಷಯಸುಖಸಂತುಷ್ಟಸ್ವಾಂತರಾಗಿರುವಾಗಲೂ ರಾಜ್ಞಿಗೆ ನಿಜಸುಖವಿರಲಿಲ್ಲ. ಒಂದು ಕಳಹಂಸಿಯು “ಮೆಲ್ಲಡಿಗಳೊಡನೆ ದಿಟ್ಟಿಗಳ್ ಪರಿಯೆಯುಂ ತಣ್ಗಾಳಿಯಲಪಿನೊಳುಲಿವ ತಳಿರೆಲೆಯ

ದನಿಗೆ ಬೆರ್ಚುವ ಶಿಶುವಂ ಆತ್ಮಪಕ್ಷಪುಟದೊಳ್ ಪುದುಂಗೊಳಿಸಿಯುಂ ಕಂಠೋಪಕಂಠದೊಳ್ ನಿಂದ ಮರಿಯ ಕೊರಳ ಕಿರುದುಪ್ಪುಳಂ ಚಂಚುಮುಖದಿನಣ್ಕೆಗೆಯ್ದುಂ ಸರಸಬಿಸಬೀಜರಾಜಿಯುಂ ಖಂಡಿಸಿ ಕುಟುಕನಿಕ್ಕಿಯುಂ ಮೃದುಮೃಣಾಳನಾಳರಸಮಂ ಚಂಚುಪುಟಶುಕ್ತಿಯಿಂದೆರೆದುಂ...... ಮೋಹರಸಪ್ರವಾಹದೊಳಗವಗಾಹಮಿ" ರಲು ಆದರ ಸಹಜಪ್ರೀತಿಯುಂ ಸಖೀಜನಕ್ಕೆ ತೋರಿ ತಾನೂ ಪುತ್ರದೋಹದಕುತೂಹಳೆಯಾದಳು. ಆತ್ಮಜನ್ಮವದನೇಂದು ಜ್ಯೋತ್ಸ್ನೆಯಿಂ ಲೋಚನೋತ್ಸವವನ್ನು ಪಡೆಯದ ಬಾಳುವೆಯೆಂಥ ಬಾಳುವೆ? ಎಂದು ನಿಸ್ಸೀಮ ನಿರ್ವೇಗವಾಯಿತು. ಅಗ್ರಮಹಿಷೀ ಸಂಪತ್ತಿಯಿದ್ದೂ ಪುತ್ರಮೋಹರಸಾಸ್ವಾದನತೃಪ್ತಿಯಿಲ್ಲದ್ದರಿಂದ ಚಿಂತಾಪರಂಪರೆಗೀಡಾದಳು ರಾಣಿ. ತನ್ನ ಶ್ರೀವಿಲಾಸವೆಲ್ಲವೂ ಸತ್ಪುತ್ರನನ್ನು ಪಡೆಯದಿದ್ದರೆ ವೃಥಾಯಾಸವೆನಿಸಿತು.

ಅರಿಸಿನದಂಚೆಯುಂ ಪೊದಿಸಿ, ಪೊರ್ಕುಳಿನೆಸ್ನಯ ಸೊಂಕಿನೊಳ್ಮರ ।
ಲ್ದಿರಿಸಿ, ಲಲಾಟದೊಳ್ತಿಲಕಮಂ ಸೊಡರ್ವಕ್ಕಿಸೊಳಿಟ್ಟು-
ಮುದ್ದಿಸೀ ॥
ಪರಮೆರಡುಣ್ಮೆ ಕಣ್ದಣಿಯದರ್ಭಕನಂ ನಡೆನೋಡಿನೋಡಿ ಪಾ ।
ಲ್ದೊರೆದು ಕುಚಂಗಳಿಂ ಬಿಡದೆ ಸೂಸುವ ಸ್ನೆಪೆನಗೆಂದು
ನಾಗರ್ವೋ ॥

ಇದೊಂದೆ ಆಸೆ–ಚಿಂತೆ ಲಕ್ಷ್ಮೀಮಹಾದೇವಿಗೆ. ಹೀಗೆ ಆಸೆ ಚಿಂತೆಗಳಿಂದ ಪಾಡಳಿದಿರಲಾಗಿ

ದಿವಸಶ್ರೀ ಮಂಜಿನೊಳ್ಪಾಡಳಿಯೆ ಕಳೆಯಲಾ ಬೇಸರಂ ಬರ್ಪ
ತಿಗ್ಮಾಂ ।
ಶುಮೊಪೇಳೆಂಬನ್ನೆಗಂ ತೊಟ್ಟರುಣಮಣಿವಿಭೂಷಾಂಶುಬಾಲಾ
ತಪಂ ತೀ ॥

ವೃವಿಸಂ ಕೇಳೀಗೃಹಾಂತಸ್ಥಳಿಯುನವನಿಪಾಳಂ ಸುತಾವಾಪ್ತಿ
ಚಿಂತಾ ।
ಪ್ಲವದೊಳ್ಮೇಂಕುತ್ತುಮಿರ್ದಾ ಸತಿಯು ಪರಿಮಿತಾಸ್ಥಾನಮುಂ
ಮುಟ್ಟಿವಂದಂ ॥

ಕೇಳೀಗೃಹಕ್ಕೆ ರಾಜನು ಒಂದು 'ಆನೆವೊಕ್ಕ ಬೇಸಗೆಯು ಕಾಪಕೆರೆ ಯಂತೆ ಬಗೆಕಲಂಕಿದುದೇಕೆ?' ಎಂದು ಕೋಮಳೆಯನ್ನು ಕೇಳುವನು. ಸುಂದರವಾದ ಭುವನದಲ್ಲಿ ಮನೋಹರವಾದ ದೇಶದಲ್ಲಿ ರಮಣೀಯ ವಾದ ಪುರದಲ್ಲಿ ರಮ್ಯವಾದ ಹರ್ಮ್ಯದಲ್ಲಿ ರಸಿಕನಾದ ಅರಸನ ಬಳಿ ಯಲ್ಲಿ ಇದ್ದೂ, ಎಲ್ಲ ಕಲೆಗಳೂ ಕೊಡಬಲ್ಲವಾದ ಆನಂದವೂ ಬೇಡೆನಿ ಸುವಂತೆ ಮಾಡುವ ಸುತವ್ಯಾಮೋಹವು ಎಂತಹದಿರಬೇಕು? ರಾಣಿ-ವಾಸದಲ್ಲಿ ರಸಗೇಯಕ್ಕೆ ನೆಲೆಯಿಲ್ಲ; ಆತೋದ್ಯಸ್ವನವು ಸೂಸದಾಗಿದೆ, ಲಾಸ್ಯಪ್ರಸಂಗವಿಲ್ಲ, ವಿಪಂಚಿಯು ಇಂಚರವಡಗಿದೆ, ವಂಶಸ್ವನವು ದಳ್ಳಿಸಲೊಲ್ಲದು. ಇದೇನು ಚಮತ್ಕಾರ? ಅರಸನಿಗೆನಿಸಿತು. ವಂಶೋ ದ್ಧಾರಕನ ಬರವಿಗಾಗಿ ಹಾದಿಕಾಯುವವಳಿಗೆ ವಂಶೀಸ್ವನವೇನು ಮೋಹಿಸುವದೇ? ಒಂದು ಜೀವಕ್ಕೆ ಇನ್ನೊಂದು ಜೀವವು ಕೊಡ ಬಹುದಾದ ಆನಂದದ ಪಾಸಂಗಕ್ಕೆ ಸಿಖಿಲಕಲಾನಂದವೂ ಬಾರದು. ಪರಿಚಾರಿಕೆಯರಿಂದ ಅವಳ ಚಿಂತೆಯ ವಿಷಯವು ತಿಳಿಯಲು 'ಬಯಸ ದರಾರ್ ಸಂತತಿಪ್ರಾಪ್ತಿಯಂ?' ಆದಕ್ಕೆ 'ಪ್ರಾಕ್ತನಪುಣ್ಯಪ್ರಾಪ್ತಿ ಯಿಂದಾ ಬಯಕೆ ಸಮನಿಪುದು' ಆದರೆ, ಹಿರಿಯರ ಆಶೀರ್ವಾದ ಬೇಕು, ದಾನಮಾಡಬೇಕು, ಜಿನಾರ್ಚನೆಯಾಗಬೇಕು ಎಂದು ಹೇಳುವನು. ಸರಿ.

ಭ್ರಮರಹಿತಂ, ಹೃದ್ಯಂ, ಸ್ಮೇ ।
ರಮುಖಂ, ಲೋಕೈಕಹಿತಕರಂ, ಸುಕುಮಾರಂ ॥
ಸಮನಿಸುಗೆಂದರ್ಚಿಸಿದಳ್ ।
ಸುಮನೋಮಂಜರಿಯಿನಾಕೆ ಸುಮನಸ್ಸುತನಂ ॥

ತನ್ನ ಮನಃಪ್ರೀತಿಗಾಗಿ ಪೂರ್ವದಲ್ಲಿದ್ದ ಎಲ್ಲ ಕಲೆಗಳೂ ಜಿನನಿಗರ್ಪಿತವಾದುವು.

ಅಟ್ಟುವಸೀಯಸಪ್ಪರಸಗೇಯಮದಂಗೆಡೆಗೊಂಡು ಚಿತ್ತಮಂ।
ಮುಟ್ಟುವ ಹೃದ್ಯವಾದ್ಯಲಯದೋಜೆಯಿನೊಂದೆ ಲಯಕ್ಕೆ
ಲಕ್ಕೆಯಂ॥
ಮೆಟ್ಟುವ ಪೆಕ್ಕಣಂ ತುರುಗಿಕಟ್ಟುವವಂದಸಮಾಲೆ ಲೀಲೆಯಂ।
ಪುಟ್ಟಿಸೆ ನಿಚ್ಚಮರ್ಚಿಸುವಳಾಸತಿ ದಿವ್ಯಜಿನೇಂದ್ರಗೇಹಮಂ॥

ಯಾವ ವ್ರತ ನಿಯಮ ನೋಂಪಿಗಳಿಗೂ ಆ ಸುಕೋಮಲದೇಹವು ಸಿದ್ಧವಾಯಿತು.

ಅನುಲೇಪಂ ತನುವಿಂಗೆ—ಮಾಲೆ ಕಬರೀಭಾರಕ್ಕೆ—ಹಾರಂಘನ।
ಸ್ತನಭಾರಕ್ಕೆ ಅತಿಭಾರಮೆಂಬ ಸುಕುಮಾರಶ್ರೀಯನಾಳ್ದಾ ಸಿತಂ।
ಬಿನಿ ಭೂಶಯ್ಯೆಗೆ, ಜಾಗರಕ್ಕೆ ಅನಶನಕ್ಕೆ ಏಕಾಂತರಕ್ಕೆ ಏಕಭು॥
ಕ್ತಿನಿಯಮಕ್ಕೆ ಒಡಲಂ ನಿಯೋಜಿಸಿದಳ್ **ಆಶಾಶಕ್ತಿ**
**ಸಾಮಾನ್ಯಮೇ** ॥

ಆಶೆಯು ಲೋಕೋತ್ತರ ತಪಸ್ಸನ್ನೂ ಎಸಗಿಸುವದು. ಆದರೇನು? ಮಜ್ಜಿಗೆಯನ್ನು ಕೊಳ್ಳಲು ಮಾಣಿಕವನ್ನು ಮಾರಿದರು ಎಂಬಂತೆ ವ್ರತದ ಗತಿಯಾಯಿತಲ್ಲ! ಎಂದು ಕವಿಗೆ ಕಳವಳ. 'ಸಕಲಸುಖ ಹೇತುವಂ ಪುತ್ರಕಾಮ್ಯದಿಂ ವ್ರತಮಂ ನೋಂತಳು—ವಿಲಾಸವತಿಯರ ಮತಿಗಳ್ ಸುಕುಮಾರಂಗಳ್'. ಅದಿರಲಿ

ಮುಂದೆ ಯಥಾಕಾಲದಲ್ಲಿ ಅರಸಿಯು ಋತುಮತಿಯಾದಳು. ಕನಸು ಕಂಡಳು, ಗರ್ಭವತಿಯಾದಳು, ಅರಸನಿಗೆ ಕೂಡ—

'ನೆರವೆನಗಕ್ಕುಮೀಸತಿಗೆ ಪುಟ್ಟಿದ ಬಾಳಕನೀಧರಿತ್ರಿಯಂ
ಧರಿಯಿಸಲೆಂಬ ಸಂತಸ'

ಉಂಟಾಯಿತಷ್ಟೆ ಅಲ್ಲ

ವನಿತಾಸಾಮಾನ್ಯಮಲ್ತೀನಿಯಮಮೆನಿಸಿ ತಾತ್ಪರ್ಯದಿಂ
ನೋಂತು ವಿಶ್ವಾ।
ವನಿಯಂ ಕೈಕೊಂಡು ತಾಳ್ದಲ್ ನೆರೆವ ತನಯನಂ ಗರ್ಭದೊ
ಳ್ತಾಳ್ದಿದೈವಾ॥

**ನಿನಿ ನಿನ್ನಿಂದೆನ್ನರಾಜ್ಯಂ ಸಫಲಮೆನಿಸಿದತ್ತೆನ್ನ**
**ರಾಜಾಲಯಂ ಪಾ।**
**ವನಮಾದತ್ತೆನ್ನವಂಶಂ ಕುಲನದಿಯವೊಲಾಯ್ತವ್ಯವ**
**ಚ್ಛಿನ್ನಮೀಗಳ್॥**

ಎಂದು ಎರಡರಿಯದೊಲವಿನ ಮನ್ನಣೆಯ ಮಾತುಗಳನ್ನೂ ಆಡಿದನು. ಗರ್ಭವತಿಯಾದ ಲಕ್ಷ್ಮೀಮಹಾದೇವಿಯು ಬೇರೊಂದು ಲಾವಣ್ಯವನ್ನೂ ತಳೆದಳು. ಪುಂಸವನ ಮೊದಲಾದ ಆಗುವ ಮಹೋತ್ಸವಗಳಾದವು. ಮೊದಲೇ ಸುಕುಮಾರೆ, ಅದರಲ್ಲಿ ಬೇರೆ ಗರ್ಭಭಾರ—ಆದಕಾರಣ ತನುತನುವಾದ ಗರ್ಭಿಣಿಗೆ ತತ್ಸಮಯೋಚಿತ ಮಂಗಳ ಪ್ರಸಾಧನ ಬೇಕು. ಕಪ್ಪುರದ ಕಂಠಿಕೆ, ಬಣ್ಣದ ಸಣ್ಣಮಾಲೆ, ತೆಂಗಿನ ತಿರುಳೋಲೆ, ತಾವರೆಯ ನೂಲುಡೆನೂಲು, ಸಿರಿಕಂಡದಣ್ಕೆ, ಮುತ್ತಿನ ತಿಸರ, ಮೃಣಾಳಿಕೆಯ ಮುದ್ರಿಕೆ, ಹೂವಿನ ಪಿಂಡುಗಂಕಣ—ಸಕಲಸೌಭಾಗ್ಯವಾಯಿತು. ಗಾಯನ, ಬಾಜನ, ಪರಿಹಾಸ—ಎಲ್ಲವೂ ಸಾಗಿತು. ಅಂತೂ ಶುಭವಾರ ಶುಭಮುಹೂರ್ತದಲ್ಲಿ ವಂಶ ನಂದನನು ಹುಟ್ಟಿದನು.

'ಇವಳೀ ಸಂಬಂಧದಿಂದಂ ಸಫಳಮೆನಿಸಿದತ್ತೆನ್ನ ಸಂಸಾರಂ' ಎಂದು ವೈಶ್ರವಣರಾಜನಿಗೆ ಸಾರ್ಥಕತೆಯ ಭಾವನೆಯು ಮೈದೋರಿತು. ಕವಿಗೆ ವರ್ಣಿಸಬೇಕಾದುದು ವೈಶ್ರವಣಚರಿತ್ರ. ಆದಕಾರಣ ನಾಲ್ಕನೆಯಾಶ್ವಾಸದ ೧೫ನೆಯ ಪದ್ಯದಿಂದ ೧೪೫ರೊಳಗಾಗಿ ಅವನ ಮಗನಿಗೆ ದೊಡ್ಡವನನ್ನಾಗಿ ಮಾಡಿ ಯುವರಾಜಪಟ್ಟವನ್ನೂ ಕಟ್ಟಿ

ಬಿಡುವನು. ರಾಜನು ಯುವರಾಜನಿಗೆ ತಕ್ಕವೈಭವವನ್ನು ಕೊಟ್ಟು 'ಕೂರ್ವರ್ಗಸತ್ಫಲವೆನೆ ತನ್ನುಮಂ ಮಗನುಮಂ ಸಿರಿಯೊಳ್ ಸಮ ಸಾಗಿ ಮಾಡಿದಂ'

ಐಯ್ದು ಆರು ಏಳು ಎಂಟು ಈ ನಾಲ್ಕು ಆಶ್ವಾಸಗಳು ಪ್ರಕೃತಿಸೌಂದರ್ಯವರ್ಣನೆಗೆ ಮೀಸಲಾಗಿವೆ. ವಸಂತಸಮಯ, ವನಕೇಳಿ, ಜಲಕೇಳಿ, ಕೌಮುದೀಮಹೋತ್ಸವ, ಶರತ್ಸಮಯ—ಇವೆಲ್ಲವೂ ಚಕ್ರವರ್ತಿಗೆ ಸಲ್ಲಿಸಬೇಕಾದ ಕಾಣಿಕೆಯನ್ನು ಕೊಡುವವು. ಆದರೇನು? ಯಾವುದರಲ್ಲಿಯೂ ಭೌಮಾನಂದವಿಲ್ಲ. ಅಲ್ಪಸುಖ, ಅತೃಪ್ತಿ, ಅರೆಗುಟುಕು. ಬಿಸಿಲಬಾಯಾರಿಕೆಯನ್ನು ತಣ್ಣೀರು ತಣಿಸುವಂತೆ—ತಕ್ಷಣ ತೃಪ್ತಿ, ಅನಂತರ ಅತೃಪ್ತಿ. ಮಾಮರ, ಮಲ್ಲಿಗೆ, ತಿಲಕ, ಸುರಹೊನ್ನೆ, ಸಂಪಗೆ. ಹೂವಿನಜಾತ್ರೆಯೇ ನೆರೆದಿದೆ. ವನಲಕ್ಷ್ಮಿ ಮಧುವಂ ಪೀರ್ವಪೊಂಗಾಜಿನ ಬಟ್ಟಲಂತೆ, ರತಿನರ್ತನ ಕಾಂಚನತಾಳದಂತೆ, ಮನೋಹರವಾದ ಕರ್ಣಿಕಾರಕುಸುಮ. ಅದರಲ್ಲಿ ಅಳಿಮಾಲೆ ಕಂತುನೀರಾಜನ ದೀಪಮಾಳಿಕೆಯ ಚೂಳಿಕೆಯಂತೆ, ದಕ್ಷಿಣವಿಟಂಗೆಣೆಯಾದ ದಕ್ಷಿಣಾನಿಳ. ಜಗತ್ತ್ರಯವೂ ತನ್ನ ಉಂಡಿಗೆಗೆ ಸಾಧ್ಯವಾಯ್ತೆಂದು ಮದನನಿಗೆ ಜಂಭಬರುವಂತೆ ಸಕಲ ಸನ್ನಾಹ. ಅದರಲ್ಲಿಯೂ ಮಾವು ಮಲ್ಲಿಗೆಗಳನ್ನು ಕಣ್ಗಳ ಹಸಿವು ಓಡುವವರೆಗೆ ಎವೆಯಿಕ್ಕದೆ ನೋಡಿದರೂ ಮಧುವಿಗೆ ತೃಪ್ತಿಯಿಲ್ಲ. ಚೈತ್ರವು ವಿಚಿತ್ರವಾಗಿ ಮೆರೆಯುತಿದೆ. ರಾಜನು ನರ್ಮಸಚಿವರೊಡನೆ ವಿದ್ವಾಂಸರೊಡನೆ ಚಿತ್ರಶಾಲೆಯಲ್ಲಿದ್ದಾನೆ. ಅಪೂರ್ವ ಚಿತ್ರಿಗನೊಬ್ಬನು ಚಿತ್ರವನ್ನು ತಂದು ಅವನ ಅಡಿಯೆಡೆಗಿಟ್ಟಿದ್ದಾನೆ. ತಾಮ್ರತುಂಡದಿಂದ ಕೆಂದಳಿರನ್ನು ಕಡಿಯುವ ಗಿಳಿ: ಚಂಚುವಿಂದ ಬಿಸಕಾಂಡವನ್ನು ಕಚ್ಚುವ ಅಂಚೆ; ಪೂಗೊಳ, ತಣ್ಣೆಲರು— ಎಲರಿಗೆದ್ದ ತೆರೆ, ತಡಿಗೆ ನೆರೆದ ರಥಾಂಗಪಕ್ಷಿ, ಹಂಸಜಲಕೇಳಿಗೆದ್ದ ಬುದ್ಬುದಗಳು,

ನೊರೆ, ಅವೆ ಅರಳುವ ಹೊನ್ನೈದಿಲೆ; ರಾಜಹಂಸವನ್ನು ಬರೆನಲ್ಲಿ ವರ್ಣಕ್ರಮವೂ ವ್ಯಕ್ತಿಯೂ ಮಧುರವಾಗಿತ್ತು. ಬಟ್ಟಿದುವಾದ ಕಣ್ಣು, ಕಣ್ಣಕಿರಿಯಾಲಿ; ಆಲಿಯ ಸುತ್ತಣ ಸಣ್ಣ ಬೆಳ್ಪು, ಕರ್ಬುರ ಚ್ಛವಿಯ ಚಂಚು, ನೈಯ ಬೆಳ್ಪು, ಕಾಲ ಅಡಿದಾಳದ ಮೇಗಣ ಕೆಂಪಿನಸೊಕ್ಕೆ—ಈ ಶಬ್ದಚಿತ್ರವೂ ಚಿತ್ರವಿಚಿತ್ರವಾಗಿದೆ. ನಾಗಚಂದ್ರನು ಇಲ್ಲಿ ತನ್ನ ಚಿತ್ರಶಾಸ್ತ್ರಜ್ಞಾನವನ್ನೂ, ಚಿತ್ರನಿರ್ಮಾಣಕೌಶಲ್ಯವನ್ನೂ ಬೆಳಗಿಸುವನು.

ಅಕಟ ರೇಖೆಯಿನಪ್ಪವರ್ಣದ ಮಿಶ್ರವರ್ಣದೊಳಾದ ಕೌ ।
ತುಕಮೆ, ವೃಕ್ಷಲತಾದಿಜಾತಿಯೊಳೋಜೆಯಂ ಗೆಡೆಗೊಂಡ ಚಿ ॥
ತ್ರಿಕನ ಭಾಪಮೆ, ಪತ್ರಭಂಗದ ಭಂಗಿಯೇ, ಮಜಭಾಪುಲೌ ।
ಕಿಕಮವೂಸುಷಮೆಂದು ಕಂಟಕಿತಾಂಗನಾದನಿಳಾಧಿಪಂ ॥

ಅಂತೂ ಉದ್ಯಾನಮಾಲೆಯ ರಸಚಿತ್ರವು ಚೀರಘಟ್ಟಿ, ಮಾಂತನ್ನು, ವಿಶ್ವಕರ್ಮರಿಗೂ ಬರೆಯಲು ಬರದೆಂಬಂತಿದೆ. ಅವನಿಗೆ ಮೆಚ್ಚಿ ಕೊಡುವನು ಅರಸನು. ಸಭಾಸದರು ಇಬ್ಬರ ಕರ್ಮಕ್ಕೂ ಮೆಚ್ಚಿ ವರು. ಆ ಮೇಲೆ ವನಪಾಲಕನು ವನಲಕ್ಷ್ಮೀವಿಲಾಸವನ್ನೆ ತಂದು ಮುಂದಿರಿಸುವಂತೆ— ಹೊಂಬಾಳೆಯ ಹಾಳೆಯಲ್ಲಿ ಮಾಪಿನಕೊನೆ, ಮಲ್ಲಿಗೆಯ ನನೆ; ಚೆನ್ನೈದಿಲ ಎಲೆಯಲ್ಲಿ ಅತಿಮುಕ್ತಕನಲರು, ತಮಾಳದ ತಳಿರು; ತಾವರೆಯ ಕೋಡೆಲೆಯಲ್ಲಿ ಅಶೋಕದ ಕುಡಿ ಸುರಹೊನ್ನೆಯ ಹೂಗೊಂಚಲು, ಎಳೆಬಾಳೆಯ ಹಸುರೆಲೆಯಲ್ಲಿ ಕೊಸಗಿನ ಕುಸುಮ, ಸಂಪಗೆಯ ಮುಗುಳು; ಹೊಂಗೇದಗೆಯ ಎಸಳದೋಣಿ ಯಲ್ಲಿ ತಿಳಕದ ಕಳಿಕೆ, ಬಕುಳದ ಮುಕುಳ; ಎಳೆಮುತ್ತುಗದೆಲೆಯಲ್ಲಿ ದವನದತೆನೆ, ಮರುಗದ ಕುಡಿ—ಇವುಗಳನ್ನು ಬೇರೆಬೇರೆಯಾಗಿ ಬಿಸಲತೆಯಿಂದಲೊ, ನೈದಿಲ ಸಣ್ಣಕಾವಿನಿಂದಲೊ, ಬಿಸತಂತುವಿನಿಂದಲೊ, ಕರ್ಬಾಳದ ಬಳ್ಳಿಯಿಂದಲೊ, ತೆಂಗಿನ ಸುಳಿಯೆಲೆಯ ಸುಲಿಕೆ

ಯಿಂದಲೊ, ಕೇದಗೆಯ ಬೆಳ್ಳುಳಿಯ ಸಿಬುರಿನಿಂದಲೊ ಸುತ್ತಿ ಆ ಹೂಗಳ ಸೊವಡಿಗೆ ಸೋತೆರಗಿದ ಮರಿದುಂಬಿಗಳೆ ಅವುಗಳಿಗೆ ಮುದ್ರೆಗಳಾಗಲು—ರಾಜನಿಗೆ ಅವುಗಳನ್ನರ್ಪಿಸುವನು. ಆ ಪೊಸತೆನಿಸಿದ ವಸ್ತು ಸೋಲವನ್ನು ಹುಟ್ಟಿಸಲು ಅವನಿಗೂ ರತ್ನಾದಿಗಳನ್ನು ಅರಸನು ಮೆಚ್ಚುಗೊಡುವನು. ಹೂಚಿಗರುಗಳಿಗೆ ಮನಸೋತು ಹೊನ್ನು ರನ್ನಗಳನ್ನೀವರೇ ? ಎನಬಹುದು. ಆದರೆ, ಕಾವ್ಯದಂತೆ ದಾನದಲ್ಲಿಯೂ

'ಅಲಘುಲಘುಗಣನೆಯಿಂ ಪಂ ।
ಬಲಿಸದು ಬಗೆ ಧನಮನರ್ಥಿಗೀವೆಡೆಯೊಳ್ ॥

ಎಂಬುದೆ ನಿಜ. ಆಮೇಲೆ ಶುದ್ಧಾಂತಕಾಂತಾಜನದ ಜಳಕೇಳಿ ಲೀಲೆಯುನ್ನು ನೋಡಿ ಅವರಿಗೂ ಮೆಚ್ಚೀಯಲು ಪಟ್ಟವರ್ಧನವನೇರಿ ಹೊರಡುವನು ವೈಶ್ರವಣ. ಮುಂದೆ ವಂದಿಮಾಗಧವೃಂದವು ಜಯಜಯಾ ಎನ್ನುತಿದೆ; ವಿಲಾಸಿನೀಜನರು ನಡೆದಿದ್ದಾರೆ; ಪೆಂಡವಾಸದ ತಂಡ ಬರುತ್ತಿದೆ. ಭೃಂಗೀರವವು ಮಂಗಳಗೇಯವಾಗುತಿದೆ.

'ಈವನಿತಾಸಹಸ್ರದೊರೆಗಂದೊರೆಗಂ ರತಿಕಾಮದೇವನೀ ।
ಭೂವಲಯಾಧಿನಾಯಕನ ಪೋಲ್ವೆಗೆ ಪೋ ದೊರೆಯಲ್ಲ—

ಎಂದು ಗಿಳಿಗಳೂ ಕೋಕಿಲಗಳೂ ಉಲಿಯುತಿವೆ. ತೆಂಬೆಲರ ತೀಟದಲ್ಲಲ್ಲಾಡುವ ತಿಳಕ, ಕೇಸರ, ಅಶೋಕಗಳಿಂದ ಬೀಸುವ ಗಾಳಿಯು ಅಪಗತರಾಗವಾದ ಯೋಗಿಗಳ ಚಿತ್ತವನ್ನೂ ನಡುಗಿಸುವಂತಿದೆ. ಅಲ್ಲಿಯೇ ಸಹಜಸುಂದರವಾದ ಚೂತವು ಕಂಗೊಳಿಸುತಿದೆ. ಪರಿವಾರದೊಂದಿಗಿದ್ದ ಸುಕರಕವಿತಾಮನೋಹರನು ಅದನ್ನೇ ಕುರಿತು ತನ್ನ ಕಾವ್ಯಪ್ರಸಂಗದಿಂದಲೂ ರಾಜನನ್ನು ವಿನೋದಿಸುವನು. (ನಾಗಚಂದ್ರನು ಈ ಮಹಾಕಾವ್ಯವನ್ನು ಬರೆಯುವ ಪೂರ್ವದಲ್ಲಿ ಪ್ರತ್ಯೇಕವಾಗಿ [೬ನೆಯಾಶ್ವಾಸ ೨೭-೩೪] ಈ ಪದ್ಯಗಳನ್ನು ಬರೆದು

ರಸಿಕರಿಂದ ಕವಿತಾಮನೋಹರನೆಂಬ ಬಿರುದನ್ನು ಪಡೆದಿರಲೂ ಸಾಕು.) ಕವಿಗೆ ಮೆಚ್ಚು, ಚೂತಕ್ಕೆ ಸಹಜಸೌಂದರ್ಯನೆಂಬ ಬಿರುದು— ದೊರೆಯುವವು. ಬಳಿಯಲ್ಲಿಯೆ ಬಳ್ಳಿಮಲ್ಲಿಗೆಯಿದೆ. ಚೂತರಾಜ-ಮಲ್ಲಿಕಾಸುಂದರಿ ಈ ಅನುರೂಪವನಮಿಥುನದ ಕಲ್ಯಾಣ ಕಟ್ಟುವದಕ್ಕೂ ತಡವಿಲ್ಲ. ಕನ್ನಡಕವಿಗಳಿಗೆ ಮಾವು ಎಂದರೆ ಜೀವ ಮಲ್ಲಿಗೆಯೆಂದರೆ ಪ್ರಾಣ. ಸಂಸ್ಕೃತಕವಿಗಳಿಗೆ ಕಮಲ ಮಧುಕರ ಗಳಿದ್ದಂತೆ. ಮಾವು ಮಲ್ಲಿಗೆಗೆ ತನ್ನ ಕಾವ್ಯದ ಕಾಣಿಕೆಗೊಡದ ಕನ್ನಡ ಕವಿ ದೊರೆಯುವದಪರೂಪ. ಶರಪಂಚಕಕ್ಕೂ ಮಲ್ಲಿಗೆಯೊಂದೆ ಸಾಕು ಎನುವಂತೆ ಅದರ ಸಡಗರ.

ಗಾಳಿಯು ಗಂಧವಹನಾದದ್ದೂ, ಮಾಗಿಹೋಗಿ ಮಧುಮಾಸ ವಾಗಿದ್ದೂ ಕಾಮನು ಕುಸುಮಾಯುಧನಾಗಿದ್ದೂ ಮಲ್ಲಿಗೆಯಿಂದಲೇ.

ಅಸದಳಮಾಗೆ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ ।
ದೆಸಗುವ ಗಾಳಿ ಗಂಧವಹನಾದುದು; ಮಾಗಿಪೋಗುಕಾಳ್ಪ್ವರಂ ॥
ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು;
ಕೈದುವಂ ।
ಪೊಸಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದ
ನಂಗಜಂ ॥

ಸರಿ— ಮಂಗಳಪಾಠಕನು ಮಲ್ಲಿಗೆಗೆ ಮಂಗಳವೃತ್ತಗಳನ್ನೋದಲು ಮುಂದರಿವನು.

ಜನಸಂಮೋಹನವಿದ್ಯೆ ತನ್ನಮಧುವಿಂ ಪುಟ್ಟಿತ್ತು ಪುಷ್ಪಂಗಳು ।
ಳ್ಳನಿತುಂ ನೋಂತವೆತನ್ನಕೇಳಿಸಳಭಾಗ್ಯಕ್ಕೆ+ಎನಿಪ್ಪ+ಅಗ್ಗದ+ಈ॥
ವನದೇವೀಸಖಿಗೆ ಈ ವಸಂತವಿಜಯಶ್ರೀದೇವಿಗೆ ಈ ಚೂತರಾ।
ಜನ ಮಾದೇವಿಗೆ ಮಲ್ಲಿಕಾರಮಣಿಗಂ ಭದ್ರಂ ಶುಭಂ ಮಂಗಳಂ॥

ಇತ್ತ ಅಬಲೆಯರ ಮೃದುಪದಪಾತದಿಂದ ಅಶೋಕವು ಚಿಗುರೊಡೆ

ಯುಲು, ಏಕೇಂದ್ರಿಯ (ಸ್ಪರ್ಶವಷ್ಟೇ) ಗಳಾದ ವನಸ್ಪತಿಗಳಿಗೆ ಹೀಗೆ ಸ್ಮರೋದ್ಗಾರವಾದರೆ ಪಂಚೇಂದ್ರಿಯಾಸಕ್ತರಾದ ಮಾನವರನ್ನು ಪಾರಸ್ತ್ರೀಯರು ಕಾಲಲ್ಲಿ ಹಿಚುಕಿಬಿಡುವದು ಹೆಚ್ಚಲ್ಲವೆಂದು ರಾಜನು ಮನದಲ್ಲಿ ಬಗೆದು ಯಾರಿಗೆ ಮಣಿನೂಪುರ, ಯಾರಿಗೆ ಹಂಸತಿಳಕ, ಯಾರಿಗೆ ಮುತ್ತಿನಸರ ಮೆಚ್ಚುಗೊಟ್ಟು ದಾನದಸುಗ್ಗಿಯಿಂದ ಮಹಾ ವಸಂತೋತ್ಸವನ್ನು ಜರುಗಿಸುವನು. ಆ ಮೇಲೆ ಪುಷ್ಪಾಪಚಯ ಪ್ರಸಂಗ ನಡೆವುದು. ನಾಗಚಂದ್ರನು ಪಂಪನನ್ನು ಹೀಗೆ ಸಹಜ ವಾಗಿ ಅನುಕರಿಸುವದರಿಂದಲೆ ಅಭಿನವಪಂಪನಾಗಿದ್ದುದೇನೋ! ಮಧು ಮಹೀಪಾಲನ ಸಾರಸ್ವತವೆನಿಸುವ ಕೋರಕಕುಸುಮ ಕಿಸಲಯ ಗಳಿಂದ ಒಬ್ಬರು ನೂಪುರ, ಒಬ್ಬರು ಕಾಲಕಡಗ, ಮತ್ತೊಬ್ಬರು ಉಡೆ ನೂಲು, ಮಗದೊಬ್ಬರು ಬಣ್ಣಸರ, ಇನ್ನೊಬ್ಬರು ಎಕ್ಕಸರ, ತಿಸರ ಐಸರಗಳ ಸಂಕಲೆಗಳನ್ನು,ಯಾರು ಪಿಂಡುಗಂಕಣ, ಯಾರು ಚಳಕಿಗೆ, ಚೌಕಳಿ, ಕರ್ಣೋತ್ತಂಸ, ಹಂಸತಿಳಕ—ಏನೇನೋಪಸದನಗಳನ್ನು ಸಮೆಯುವರು, ಸಿಂಗರಿಸಿಕೊಳ್ಳುವರು. ಆ ಮೇಲೆ ಜಳಕೇಳಿ. ಅಸಿ ಧಾರಾವ್ರತವೇ ಸಾಗಿದೆ.

ಇರೆಮುಡಿಬಿರ್ಚಿನಾಂದಮರೆಪತ್ತಿದಪಟ್ಟೆಯುಸುಟ್ಟುದಿಲ್ಲದಂ।
ತಿರೆ—ಕಮಳೋನ್ಮುಖಂ ಶಿಖಿಮುಖಾಸಿವೋಲಳಿಮಾಲೆ ಮುಂದೆ
ನೀ ॥
ಳ್ದಿರೆ, ಧರಣೀಶ್ವರಂ ಕೆಲದೊಳುತ್ತರಸಾಧಕನಾದ ಕಾಮನಂ।
ತಿರೆರತಿಖಡ್ಗಯೋಗಿನಿಯವೋಲ್ಜಳಕೇಳಿಯೊಳೊರ್ಬಳೊಪ್ಪಿದಳ್ ॥

ಜಲಕೇಳಿಯಲ್ಲಿ ರಾಜಸ್ತ್ರೀಯರು ತುಳಿದುಬಿಟ್ಟ ಹೂಗಳು ಜಳದೇವಿ ಯರ ಮುಡಿಗಾಭರಣವಾದುವು. ಸಂಪ್ರೀತನಾದ ರಾಜನಿಂದ ಎಲ್ಲರಿಗೂ ವಿಚಿತ್ರ ವಸ್ತ್ರಾಭರಣಗಳ ಸುರಿಮಳೆ. ಮುಂದೆ ಕವಿಯು ರಾಜನನ್ನು ಕೌಮುದಿಯಲ್ಲಿ ಅದ್ದಿತೆಗೆಯುವನು. ಸಂಜೆಯಾಗಿದೆ.

ಸೂರ್ಯನ ಉದಯಕಾಲದ ರಾಗವು ಅಸ್ತಕಾಲದಲ್ಲಿಯೂ ಪರಿಹಾರವಾಗಿಲ್ಲ. ಏನು ಪರಿಣತಿಯಾಪರೇನು? ರಾಗಿಯ ನಿಸರ್ಗಭಾವವು ಹೋಗುವದು ಹೇಗೆ? ವೈಶ್ರವಣರಾಜನು ಸತ್ತ್ವದಲ್ಲಿ ವಿರಾಗಿ, ಅವನಿಗೆ ನಿಸರ್ಗವೈಭವ,—ಅದಕ್ಕೆ ಮುಕುಟಮಣಿಯಂತಿದ್ದ ಸ್ತ್ರೀಸೌಂದರ್ಯ ಯಾವುವೂ ಸೆರೆಹಿಡಿದಿಡಲಾರವು. ಅವನಿಗೆ ಅದೆಲ್ಲವೂ ಕೆಲ ಕಾಲದ ವಿನೋದ ಮಾತ್ರ. ಆತ್ಯಂತಿಕ ಆನಂದವು ಆತ್ಮದಲ್ಲಿದೆ. ಅದರ ಸೌಂದರ್ಯವೇ ಪರಮಪ್ರೀತಿಯನ್ನುಂಟುಮಾಡುವದು. ಉಳಿದುದೆಲ್ಲವೂ ಯಾತ್ರೆ, ಪ್ರಯಾಣ; ಹೋಲಿಸಿನೋಡಲು ಪ್ರಮಾಣ ಮಾತ್ರ.

ರಾಜನು ಬೆಳ್ದಿಂಗಳನ್ನು ನೋಡುವನು. ಎಂಥ ಬೆಳ್ದಿಂಗಳು!

ಶೃಂಗಾರಾರ್ಣವಫೇನಪಿಂಡಂ, ಅತನುಶ್ರೀ ಸಿಂಹಪೀಠಂ, ನಭೋ।
ಮಾಂಗಲ್ಯಾಯತನ ಪ್ರಕಾಶಕಳಶಂ, ಸಂಭೋಗಲೀಲಾನಟೀ॥
ರಂಗಂ, ಲೋಚನಪುತ್ರಿಕಾಕೃತಕಶೈಲಂ, ಕಂತುದೇವೆಂದ್ರವಾ।
ತಂಗಂ, ಸುಂದರಮಾದುದಭ್ಯುದಯದೊಳ್ ಬಿಂಬಂ ಸುಧಾ
ಸೂತಿಯಾ॥

ಮನೋಜಾನಳಜಿಹ್ವಾಕ್ಷೀರಧಾರಾಹುತಿಯಂತೆ ಪಸರಿಸಿ ಹರಿದು ಹಬ್ಬಿದ ಬೆಳ್ದಿಂಗಳು!

ಆತನು ಸತನುವಾದಂ ಕಾಮಸಾಮ್ರಾಜ್ಯಲಕ್ಷ್ಮೀ।
ಲತೆಯ ಲಲಿತಲಾಸ್ಯಪ್ರೌಢಿ ಚೆಲ್ವಾದುದೀಗಳ್॥
ರತಿಯ ಸೊಬಗು ಬಿಂಕಂಬೆತ್ತುದೆಂಬಂತು ನೇತ್ರಾ।
ಮೃತಮಯಮೆಸೆದತ್ತಾ ಚಂದ್ರಿಕಾಶ್ರೀವಿಳಾಸಂ॥

ವಿಲಾಸಿನಿಯರ ಲೀಲಾಂದೋಳಕೇಳಿಯು ಸಾಗುವದು. ಒಂದು ಕಡೆಗೆ ಜೋಗಿತಿ ತಾಯಿಯು 'ಇನಿಯನನ್ನು ಬಿಡು' ಎಂದು ಬೋಧಿಸಿದುದಕ್ಕೆ ಮಗಳು 'ಕೂರದರಾರ್ ಕಿರಿಯಂದು—ಕೂರಿಸಿದ ಕಾದ

ಲನಂ ಬಿಸುಡೆಂದು ಕೀರಿ ಬಾಯ್ಮುಂಟಿಸಗೆಂದು ಬಗ್ಗಿಸುವೆ' ಎಂದು ಪ್ರತಿಕೇಳುತಿದ್ದಾಳೆ. ಇನಿಯರು ತಂತಮ್ಮ ಮನೋವಲ್ಲಭೆಯರ ಭಂಗುರಾಪಾಂಗಪಾತಗಳನ್ನು, ಸಗೆಗಣ್ಣಳ ವಿಳಾಸವನ್ನು, ಕಣ್ಣಾ ಮಾಯೆಯನ್ನು ಬಣ್ಣಿಸುತ್ತಿದ್ದಾರೆ. 'ಹರಿಯುರದಲ್ಲಿ ಗೋಪ ವಧುವಿಂ ಮದಸಂ ವಿಜಯಪ್ರಶಸ್ತಿಯುಂ ಬರೆಯಿಸಿದಂ' ಪೆರರನ್ನು ಕೊರಚಾಡಿ ಕಾಡನೇ? ಎಂದು ಅರಸನೆನ್ನುವನು. ಹೀಗೆಯೇ ರಾತ್ರಿ ಯೆಲ್ಲವೂ ಕಳೆವುದು. ಮುಂದೆ ನಾಟಕಶಾಲೆಯಲ್ಲಿ! ಕಾಮನ ಕೋದಂಡವೇಕೆ?' -ಇವರ 'ಪುರ್ಬಿನ ಜರ್ಬು' ಕೂಡ ಜಗವನ್ನು ಗೆಲ್ಲಲು ಸಾಕೆನುವಂಥ ಸುಂದರಿಯರು ಅಲ್ಲಿ! ವಾಂಶಿಕನ ಬಾಜಣೆ ಕಾಮುಕಾಮುರ್ಕಲತಾಜ್ಯಾರಾವಮೆಂಬಂತೆ! ಪಸುರ್ವಟ್ಟೆಯ ಕಂಚುಕ, ನೇತ್ರವಟ್ಟೆಯ ಪೊಸಚಲ್ಲಣ, ಮುತ್ತಿನದಂಡೆ ಉಟ್ಟು ತೊಟ್ಟು—ಮೂರೆಡೆ ಬಳುಕಿದ ಕಾಮನಬಿಲ್ಲಿನಂತೆ ತ್ರಿಭಂಗಿಯ ನಿಲುವಿ ನಿಂತ ನರ್ತಕಿ ಲೀಲಾವತಿ! ಸ್ಮರವಿಜಯಕ್ಕಿದೆ ನಿರ್ವಾಣರೇಖೆಯೆನೆ, ನೃತ್ಯವಿದ್ಯೆಯೆ ಪರಿಜಾ ಕೈಕೊಂಡುದೆಂಬಂತೆ ಅವಳಾ ನರ್ತನ! ಮನದ ತೊಡರ್ಪು, ಲೋಚನದಡರ್ಪು, ಅಲರಂಬಿನ ಕೂರ್ಪು, ಸರ್ವ ಮೋಹನ ರಸದಿರ್ಪು, ಬೇಟದ ಪೊಡರ್ಪು, ಅಭಿಮಾನದ ನಟ್ಟತುರ್ಪು, ನೀರೆಯನೇರ್ಪು, ಜೀಯಾ ಭಾಪ್ಪು ಎನಿಸಿದವು.

ಮನದಿಂ ಭಾವಮುದೀರ್ಣಮಾಗೆ, ಮುಖದಿಂ ಕೈಗಣ್ಮೆ ಹಾವಂ
ವಿಲೋ।
ಚನದಿಂ ಪೊಣ್ಮೆ ವಿಲಾಸಂ, ಒತ್ತರಿಸೆ ಪುರ್ಬಿಂ ವಿಭ್ರಮಂ, ಕಿಂಕಿಣೀ॥
ನಿನದಂ ಗೀತದಮೆಯ್ಗೆ ಬಾಜಿಪಲಯಮ್ವ್ಯಕ್ತಾಕ್ಷರ ವ್ಯಕ್ತಿಯಿಂ।
ಜನಸಂಮೋಹನಮಾಗೆ ದೇಸೆವಡೆದತ್ತಾ ನರ್ತಕೀ ನರ್ತನಂ॥

ಅವಳ ಕಿಂಕಿಣೀಕಳಝುಂಕೃತದಿಂದಾದ ಶೃಂಗಾರರಸಪ್ರವಾಹವು ಸಕಲ ರಸಗಳನ್ನು ನುಂಗಿತು. ಇಂತು ಸಂಗೀತಪ್ರಸಂಗವಾದಮೇಲೆ

ತಾಂಬೂಲವಾಗಿ ಸಭಾವಿಸರ್ಜನವಾಗುವದು. ಹಾಗೆಯೆ ಕಾಲ ಕಳೆದು ಮಳೆಗಾಲನ ಸೂಚನೆಯಂತೆ ಪಡುವಲ ಗಾಳಿ ಬೀಸುವದು. ಕೇದಗೆಗೆ ಬೆಳ್ಸುಳಿ ಹುಟ್ಟುವುದು, ಸೋಗೆಗೆ ಕಿರುವೀಲಿ ಕಣ್ತೆರೆವುದು, ವಡವಾನಲ ಭೀತಿಯಿಂದ ಸಮುದ್ರವೆ ಆಕಾಶಕ್ಕೆ ಮೊರೆಹೊಕ್ಕಂತೆ ಬಾನಲ್ಲಿ ಮೋಡಗಳು ಹರಡಿಕೊಂಡಿರುವುದು, ಪಂಚರತ್ನಾವಳಿವಿಲಸಿತ ಕಂಠಿಕಾಮಾಲೆಯನ್ನು ದಿಗ್ದೇವಿ ಕಟ್ಟಿದಳೇನೊ ಎನುವಂತೆ ಶಕ್ರಚಾಪ ಶೋಭಿಸುವುದು, ಆಲಿವರಲ ಸೂಸಾಟ, ಚಾತಕದ ನಲಿದಾಟ, ತಟಿಲ್ಲತೆಯ ಲಾಸ್ಯಲೀಲೆ–ಒಂದೊಂದೂ ಸುಂದರವಾಗಿವೆ. ಮುಗಿಲು ಗುಡುಗಾಡುತ್ತಿದೆ.

ಉಗುಳುತ್ತುಂ ಸಿಡಿಲೆಂಬ ತೋರಕಿಡಿಯುಂ, ಕಾಲೂರಿ ಭೂಭಾಗ
ದೊಳ್ ।
ಗಗನಾಭೋಗಮನೆಯ್ದೆ ನೀಳ್ದು ಘನವೇಣೀಬಂಧಮಂ
ಬಿಚ್ಚಿಮಿಂ ॥
ಜುಗಳೆಂಬುಳ್ಕುವದಾಡೆಗಳ್ಬೆಳೆಯೆ ಚಂದ್ರಾದಿತ್ಯರಂ ನುಂಗಿ ಬೇ।
ನಗೆಯಂ ಬೆರ್ಚಿಸಿ ಗರ್ಜಿಸುತ್ತು ಮೊಗೆದಂ ಕಾರೆಂಬ
ಕಾಳಾಸುರಂ ॥

ಮಳೆಗಾಲದ ರೌದ್ರದರ್ಶನವೆ ಅಂತಹದು! ಯಥಾಕ್ರಮವಾಗಿ ಶರತ್ಸಮಯವೊದಗುವದು. ಚತುರಂಗಬಳದ ಕ್ರೀಡೆಯನ್ನು ನೋಡುವ ಆಸೆಯಾಗುವದು; ಅರಸರ ಆಸೆಗೂ ಫಲಕ್ಕೂ ಬಹಳ ಅಂತರವಿರುವದಿಲ್ಲ. 'ಅವಿಧೇಯಕ್ಷತ್ರಸಂವರ್ತನಸಮಯಪರಿಕ್ಷುಬ್ಧವಾರಾಶಿವೀಚೀನಿವಹಂ ಮರ್ಯಾದೆಯಂ ದಾಂಟಿದುದೆನೆ' ಸೇನೆಯು ಬಂದಿತು. ಅವರ ತುಳಿದಾಟಕ್ಕೆ ಭೂಮಿಹೊತ್ತ ಕೂರ್ಮವು ಕಣ್ಮುಚ್ಚಿತು, ಶೇಷನು ಬುಟ್ಟಿಯೊಳಗಿನ ಹಾವಿನಂತೆ ಸುತ್ತಿಕೊಂಡು ಸುಮ್ಮನಿದ್ದನು. ಅಶ್ವಸೇನೆ ಹೊರಟಿತು. ಅರಸನ ಸವಾರಿ ಹೊರಟಿತು.

ನೋಡುವ ಅಬಲೆಯರ ಕಣ್ಣಿಗೆ ಕಣ್ಬಲೆ ಬೀಸಿದಂತಿತ್ತು ರಾಜನ ರೂಪು. ಅದೇನು ರೂಪವೋ ವಜ್ರಲೇಪವೋ? ಅವನ ಅವಯವ ಗಳಲ್ಲಿ ಕಣ್ಣು ಕೀಲಿಸಿಬಿಡುತ್ತಿದ್ದುವು. ಅಶ್ವಾರೋಹಿಯಾಗಿ ಅರ ಸನು ಬರುಬರುತ್ತ ತಿರುಗಿ ಬೀದಿಗೆ ಬಂದನು. ಹೀಗೆ ವೈಭವಶಿಖರ ದಲ್ಲಿ ನಿಂತು ತನ್ನ ವೈಭವವನ್ನು ಅನುಭವಿಸುತ್ತಿದ್ದ ರಾಜನಿಗೆ ಕಂಡ ಕಣಿಯೇ ಬೇರೆ. ಫಣಿಪತಿಯ ಹೆಡೆಯವರೆಗೆ ಬೇರುಬಿಟ್ಟ, ದಿಗ್ಗಜಗಳ ವರೆಗೆ ತೊಂಗಲು ಚಾಚಿದ, ಸಹಸ್ರರಶ್ಮಿಯ ಕಿರಣಗಳನ್ನೂ ತಡೆದು ನಿಲ್ಲಿಸುವಂತಿದ್ದ ಮಹಾರಾಯನಂಥ ಆಲದಮರ–ರಾಜಾಂಗಣದೊ ಳಗಿನ ಮರ—ಇದ್ದಕ್ಕಿದ್ದಂತೆ

ಸಿಡಿಲೆಂಬ ಜವನ ಕೊಡಲಿಯ ।
ಕಡುವೊಯ್ಲಿಂ ನೆಗೆದ ಬೇರ್ಗಳೊಡನೆ ನೆಲಂ ಬಾ॥
ಯ್ವಿಡೆ ಬೆಟ್ಟು ಕೆಡೆವ ತೆರದಿಂ।
ಕೆಡೆದಾಲಮನಿದಿರೊಳವನಿಪಾಳಂ ಕಂಡಂ ॥

ಆಯಿತು. ಇದು ಹೇಗಾಗಿರಬಹುದೆಂಬ ವಿಸ್ಮಯವೆ ವೈರಾಗ್ಯಕ್ಕೆ ಕಾರಣವಾಯಿತು. ಜೀವಿತವು ಸ್ಥಿರವೇ? ದೇಹವನ್ನು ನಂಬಬಹುದೇ? ಆಲದಮರದ ಗತಿ ಹೀಗೆ! ದೇಹದ ಗತಿಯೂ ಹಾಗೇ! ಕಾಲವೆಂಬಾ ನೆಗೆ ನಮ್ಮ ದೇಹವು ಕರಡವಿದ್ದಂತೆ. ಅದನ್ನು ಕತ್ತರಿಸುವದೇನು ತಡ? ಹಗಲಿರುಳು ಉಸಿರ್ದುಸಿರನ್ನು ಕಾಳೋರಗವು ಕುಡಿದುಬಿಟ್ಟಿರ ಲಾಗಿಯೂ ಇನ್ನೂ ತಾನು ಜೀವಿಸುವೆನೆನ್ನುವದಲ್ಲ ದೇಹ! ಇದಕ್ಕೆ ಮೋಹಪಿಶಾಚ ಸೋಂಕಿರಬೇಕು! ಈ ತೊಗಲಗೊಂಬೆಯು ಶಾಶ್ವ ತವೇ? ತಲೆತೂಗುವವರೆಗೆ, ಕೂದಲಬಣ್ಣ ಹಾರುವವರೆಗೆ, ಮೋರೆತೆರೆ ತೆರೆಯಾಗುವವರೆಗೆ, ಹಲ್ಲು ಬೀಳುವವರೆಗೆ, ಕೊರಲು ಕುಸಿವವರೆಗೆ, ಬೆನ್ನು ಬಾಗುವವರೆಗೆ, ಮನುಜರ ಮೂಗಮೇಲೆ ನಿಂತು ಯಮನು

ಕುಣಿದಾಡುತ್ತಿದ್ದೂ ಇವರಿಗೆ ಸುಖದುಃಖವಿವೇಕವು ಹುಟ್ಟುವದಿಲ್ಲ ವಲ್ಲ !

**ಆವುದು ಸುಖಮೆಂದೆಳಸುವ |**
**ನಾವಸ್ತುವೆ ದುಃಖಹೇತು; ದುಃಖೋಪಶಮಂ ||**
**ಜೀವಕ್ಕೆ ಸುಖಭ್ರಾಂತಿಯು |**
**ನೀವುದು** ಭಾವಿಪೊಡಸಾರಮೀಸಂಸಾರಂ ||

ನಮ್ಮ ದೇಹಾರಣ್ಯವನ್ನು ಹೊಕ್ಕು ಕಾಲವು ಮತ್ತೇಭವಿಕ್ರೀಡಿತವ ನ್ನಾಡುತಿದೆ. ಆಯುಃಪ್ರಾಣವನ್ನು ಬೆನ್ನನೇರಿಸಿಕೊಂಡು ಕಾಲವೆಂ ಬೆರಲೆಯು ಓಡುತಿದೆ. ದೇಹವು ಅನಿತ್ಯ! ಅನಿತ್ಯ! ಇದನ್ನವಲಂಬಿಸಿಯಿದ್ದ ಭೋಗಗಳ ಬೆಲೆಯೇನು ? 'ಅನುಲೇಪಂ, ಭೂಷಣಂ, ತಂಬುಲಂ, ಉಣಿಸು, ವಿಚಿತ್ರಾಂಬರಂ, ಶಯ್ಯೆ, ದಾಮಂ, ವನಿತಾಸಂಭೋಗಂ– ಏತರೊಳಗೂ ಭಿನ್ನರೂಪರಸಾಸ್ವಾದನವಿಲ್ಲ.' ಎಲ್ಲವೂ ಪಿಷ್ಟಪೇಷಣ, ಚರ್ವಿತಚರ್ವಣ! ಇದು ಪರಮಸುಖವಲ್ಲ. ಆಕ್ಷಣದಲ್ಲಿ ನಿರ್ವೇಗದಿಂದ ರಾಜನ ಮನಸ್ಸು ಪೂರ್ವಾನುಭವವಿಷಯ ಸುಖವಿಮುಖವಾಯಿತು. ನಯಶಾಸ್ತ್ರ ಧರ್ಮಶಾಸ್ತ್ರ ಬಲ್ಲ ಯುವರಾಜನಿಗೆ ಪಟ್ಟಗಟ್ಟಿದು ದಾಯ್ತು. 'ಗುರುವಚನಮಲಂಘನೀಯ' ವೆಂದು ಯುವರಾಜನೂ ಅದಕ್ಕೆ ಒಪ್ಪಿದನು. 'ಭಾರವಾಹಕಂ ಪೊರೆಯನಿಳಿಪಿ' ದಂತಾಯ್ತು. ಅಂತೂ ರಾಜನು ನಿಶ್ಚಿಂತಸ್ವಾಂತನಾಗಿ ಧರ್ಮಧ್ಯಾನಪರನಾದನು. ಪೂರ್ವದಲ್ಲಿ ಶೃಂಗಾರೋದ್ದೀಪಕವೆಂದು ವರ್ಣಿತವಾದ ನಿಸರ್ಗವು ಈಗ ಶಾಂತರಸೋದ್ದೀಪಕವಾಗಿಬಿಟ್ಟಿದೆ. ಈ ವರ್ಣನಾಸರಣಿಯ ಲ್ಲಿಯೂ ಆದಿಪಂಪನ ನೆನಪಾಗದಿರದು. ಶಾಂತರಸವಿಷಯವಾದ ದಿವಸಾವಸಾನ ಸಮಯದಲ್ಲಿ ಅಮೃತರುಚಿಯೋಗೀಂದ್ರಚಂದ್ರನು

ತಮಮುಮಂ ರಜಮುಮಂ ಕಿಡೆಸ |
ತ್ತ್ವಮೊಂದೆನಿಂದಂತೆ ನಯನಸುಖಮಯನಾದಂ ||

ಮಾರನೆಯ ದಿನದ ಬೆಳಗೂ ಹಾಗೆಯೆ

ಮೂಡಣಸಂಜೆ ಕೆಂದಳಿರಕಾವಣದಂತಿರೆ, ಚಂದ್ರಮಂಡಳಂ।
ಬಾಡಿದ ಮಾಧವೀಮಧುರಮಂಜರಿಯಂತಿರೆ, ತಾರಕಾಳಿ ಸೀ॥
ರೋಡಿ ಕಳಲ್ದುಬೀಳ್ವಕಳಿಮೊಗೆಣೆಯಾಗಿರೆ, ತಣ್ಣಸಪ್ಪಲರ್।
ತೀಡೆ ತಪೋವಸಂಬೊಲತಿಪಾವನಮಾಯ್ತು ನಭಂ ಪ್ರಭಾತ
ದೊಳ್॥

ಈ ಪ್ರಭಾತವೆ ವೈಶ್ರವಣನ ಬೇರೆ ಜೀವನದ ಪ್ರಭಾತವಾಯಿತು. ಅಂಗದಲ್ಲಿ ಅನಂಗನನ್ನು ಕಾಣುತ್ತಿದ್ದ ಕಣ್ಣು ಬೇರೆ ಕಾಣ್ಕೆಗೆ ಹಂಬಲಿಸ ತೊಡಗಿತು. ಪಟ್ಟದ ಸಿಂಹಾಸನ, ಮದಗಜ ಬೇಡವಾದುವು. ಕುದುರೆಯೇರಿ ಕೀಳಸು (ಕಡಿವಾಣ) ಹಿಡಿವುದಕ್ಕಿಂತ ಧರ್ಮಪಥ ದಲಿದ್ದು ಮೇಲುಹಿಡಿವುದು ಮೇಲೆಂದು ಬಗೆದನರಸನು. 'ಗುರುಜನ ವಿನಯಮುಮಂ ಅತಿಶಯದ ಧರ್ಮಮುಮಂ' ಪರಿಪಾಲಿಸೆಂದು ಮಗನಿಗುಪ ದೇಶಿಸಿ ಅರಸನು ತಪೋವನಕ್ಕೆ ಹೊರಡಲು ನಿಸರ್ಗಧೈರ್ಯಗುಣ ದವನಿದ್ದೂ ಅರಸುಮಗನಿಗೆ ಶೋಕವು ಮಿಕ್ಕಿಬಂದಿತು. 'ತಂದೆಯು ಗಲ್ದೆಂತು ನಾನಿರೆ ನೈರಿಪರ್?' ರಾಜಸಭಾಸದರಿಗೆ ಅಗಲಿಕೆಯ ನೋವು ಕೆಂಡದಂತೆ ಕನಲಿಸಿತು. "ಪಡೆಯನೋಡುವೆನೆಂದು ಸಿಡಿಲಿಂದ ಕೆಡೆದಾಲವನ್ನಿದೇನು ಕಂಡನೋ!" ಎಂದು ಅವರೋಧವಧೂಕದಂ ಬಕವತ್ತಿತ್ತು. ಕಣ್ಣೀರಿಂದ ಅವರು ದೆಸೆಗಾಣದಾದರು. 'ಓ ತವಳಲಲ್ಲೆಯ ಮೆಲ್ನುಡಿಯನ್ನು ಆಲಿಸುವನಿಗೆ ಕಾಡನೀರುಡುವಿ ನಬ್ಬರ ಕೇಳಬೇಕಾಗಿ ಬಂದಿತೇ?' ಎಂದುಕೊಂಡರು ವಾರವಿಳಾಸಿನೀ ಜನರು. ಇವರ ಶೋಕವಿಕಳತೆಯನ್ನು ಕಂಡು ಅರಸನಿಗೆ ಮತ್ತಿಷ್ಟು ವೈರಾಗ್ಯವುಂಟಾಯಿತು. ಎಲ್ಲರಿಗೂ ಅವರವರಪರಿಯಿಂದ ಸಮಾ ಧಾನವನು ಹೇಳಿದರೂ ಮುನ್ನೂರು ಅರಸುಮಕ್ಕಳು 'ಧರಣೀಶನಿಂ ನಮಗೆ ಮುನ್ನಂ ದೃಷ್ಟಸೌಖ್ಯಂ ನಿರಂತರಮಾಯ್ತು ಈಗಳದೃಷ್ಟ

ಸೌಖ್ಯದೆಡೆಗಂ ಸಂದೇಹಮೇಂ?' ಎಂದು ಅವನೊಡನೆ ಹೊರಹೊರಟರು. ಕೆಲವರು ವೃದ್ಧರು "ಸುರರಾಜಂ ಬಯಸಲ್ಕೆ ತಕ್ಕ ಸಿರಿಯಂ ಪುಲ್ಲಿಂ ಗಡಂ ನೂಕ್ಕಿತಾಗಿರೆ ಕಂಡಂ ಗಂಡನೆಂ ಧೀರನೋ!" ಎಂದರು. ಕೆಲವು ಅರಣ್ಯಪಂಡಿತರು 'ಖಳರಮಾತಂ ನಂಬಿ ನೇಗಿಲ್ಲದೀ ಸಿರಿಯಂ ಬಿಟ್ಟು ತಪೋವನಕ್ಕೆ ನಡೆವಂ ಭೂಪಾಳನೇಂವ್ಯಾಳನೋ?' ಎಂದುಬಿಟ್ಟರು; ಕೆಲವರು 'ಕಳೆವರಾರೊ ವಿಧಿವಿಳಸನಮಂ' ಎಂದುಕೊಂಡರು. ಆದರೆ ಅರಸನು ನಿಶ್ಚಯದಿಂದ ಕುಮಾರನನ್ನೂ ಪರಿಜನರನ್ನೂ ಬೀಳ್ಕೊಳಿಸಿ ಜಿನಾಗಮಪ್ರಧಾನರಾದ ಶ್ರೀನಾಗಭಟ್ಟಾರಕರಿದ್ದ ಶ್ರೀಪರ್ವತಕ್ಕಭಿಮುಖನಾಗಿ ಹೊರಟನು. ಮಾರ್ಗದಲ್ಲಿ ಜನಪದಮುಖ್ಯರು ಕಾಣಿಕೆಗಳನ್ನು ತಂದರೂ ರಾಜನು ನಗುಮೊಗದಿಂದಲೆ ಬೇಡೆಂದು ಸೂಚಿಸುತ್ತ ಮುಂದೆ ಸಾಗಿದನು ಅರಣ್ಯದೊಳಗಿಂದ. ಗುಂಜಾಭರಣಭೂಷಿತೆಯರೂ, ಭುಜಪತ್ರವನುಟ್ಟವರೂ ಆದ ಶಬರಿಯರು ಮೈಯ ಕರಿಯಬಣ್ಣದ ಸೊಬಗಿನಲ್ಲಿ **'ಜನತಾವಿಳೋಚನವಶೀಕರಣಾಂಜನದಿಂ ಮನೋಭವಂ ವಿರಚಿಸಿ ಬಣ್ಣಮಂ ಬರೆದ ಚಿತ್ರದ ಪೆಣ್ಣನೆ'** ಕಂಗೊಳಿಸಿದರು. ಅವರ ಕಾಕಲಿಧ್ವನಿಯನುಪಾಶ್ರಯಿಸಿದ ವಿಪಂಚೀವಾದನವೋ! 'ನಯಂ ಬೇರೆ, ತೆರಳ್ಕೆ ಬೇರೆ, ಜತಿ ಬೇರೆ, ನಿವರ್ತನೆ ಬೇರೆ, ಬಿನ್ನಣಂ ಬೇರೆ, ಬೆಡಂಗು ಬೇರೆ' ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡಲೊಲ್ಲ. ಆದರೆ ವಿಕ್ರಮನಿಗೆ ಶನೀಶ್ವರನೆ ಶರಣಾಗಲಿಲ್ಲವೇ? ಅಲ್ಲಿಯ ಶಬರರ ಬಲವು ಭಯಂಕರವಾಗಿತ್ತು—

ಬಿದಿರಸಿಡುಂಬಿನೊಳ್ ಗಜರಿ ಗರ್ಜಿಸಿ ಪೆರ್ಬುಲಿಪಾಯೆ,ಕಯ್ದುಕೆ|
ಯ್ಯದೆ ಕೆಲಸಾರ್ದು ಮೆಯ್ಯೊಣರ್ದು ಬಂಚಿಸಿ ಗಂಟಲನೊತ್ತಿ
ಕಿರ್ಬಸಿ ||
ತಿದಿಯವೊಲಾಗೆ ಕಣ್ಮುಮುಳೆಬಿರ್ದು ಮಸುಂಟಿ ಜವಂಗೆ
ಬಿರ್ದನಿ ||

ಕ್ಕಿದನು ಸಿರಿಕ್ಕಲೀಯದು ಸಿರಿಕ್ಕುವವ್ರೋಲ್ ಶಬರಂ ಮಹಾಬಳಂ॥
ಆ ವನವು ಆನೆಯ ಮದೋದಕದಿಂದ ಬೆಳೆದು, ತಾಕಲಾಟದಿಂದ ಸೊಪ್ಪುಸೊಪ್ಪಾಗಿ, ಮೂತ್ರದಿಂದ ಕೊರಟಾಗಿ, ಲಂಡದಿಂದ ಕದಡಿ ಹೋಗುವದರಿಂದಲೂ, ಮರಿಯಾನೆ, ಹಿರಿಯಾನೆ, ಮುದಿಯಾನೆಗಳಿಂದಲೆ ತುಂಬಿರುವದರಿಂದಲೂ ಗಜಾದ್ವೈತಸೃಷ್ಟಿಯೇ ಎಂಬಂತಿತ್ತು. ಅಲ್ಲಿ ಆನೆಗಳ ಪ್ರಣಯ, ಜಳಕೇಳಿ, ಹೋರಾಟ, ಇದಿರಾಟ, ಓಡಾಟ. ಒಂದೆಡೆಗೆ ಆನೆಯನ್ನು ಸೀಳಲು ಹಾರಿ ಸಿಂಹವು ಶರಭದ ಬಾಯಿಗೆ ಬೀಳುತ್ತಿತ್ತು—ಇನ್ನೊಂದೆಡೆಗೆ ಭೇರುಂಡವು ಎರಡು ಶರಭಗಳನ್ನು ತನ್ನ ತುಂಡದಿಂದ ತೂಗುತ್ತಿತ್ತು. ಅಂತೂ ತಿರ್ಯಗ್ಜಾತಿಸ್ವಭಾವ ವ್ಯಾಮೋಹ ವೈರಸ್ಯಗಳನ್ನು ಕಂಡು ಮತ್ತೂ ರಾಜನು ನಿರ್ವೇಗಪರನಾಗುತ್ತಿದ್ದನು.

ಹಾಗೆಯೆ ಸಾಗುತ್ತ ಶ್ರೀಪರ್ವತಕ್ಕೆ ತಲುಪಿದಮೇಲೆ,ರಾಜನು ಅಲ್ಲಿ ನೋಡಿದ್ದೇನು ? ತಾನು ಬರುವ ಮೊದಲೆ ಕಾಮನು ಅಲ್ಲಿ ಬೀಡು ಬಿಟ್ಟಿದ್ದನು. ಕಿಂಪುರದಂಪತಿಗಳ ಸುರತಕೋಲಾಹಲದಿಂದ, ಗಂಧರ್ವ ಗಣಿಕೆಯರ ಎಡೆಯಾಟದಿಂದ, ಸುರಮಿಥುನದ ಸರಸದಿಂದ, ಆ ಪವಿತ್ರಪರ್ವತವು ಅನಂಗನ ಕೇಳಿಶೈಲವಾಗಿತ್ತು. ಆದರೆ ಅಲ್ಲಿಯೇ ಯೋಗಯೋಗ್ಯ ಗಹ್ವರಗಳೂ, ವಿಶಾಳ ಜಿನಾಲಯಗಳೂ ಇದ್ದವು. ಅಪವರ್ಗ ಲಕ್ಷ್ಮಿಯ ಮನವನ್ನು ಹೊಗುವಂತೆ ಭಕ್ತಿಭರಾವನತನಾಗಿ ರಾಜನು ಚೈತ್ಯಗ್ರುಹವನ್ನು ಹೊಕ್ಕು

**‘ ನಿನಗೆ ರಸಮೊಂದೆ ಶಾಂತಮೆ ।**
ಜಿನೇಂದ್ರ ! ಮನಮಾರಸಾಂಬುನಿಧಿಯೊಳಗವಗಾ
ಹನಮಿರ್ದು—**ಮಿಕ್ಕರಸಮುಂ ।**
**ಕನಸಿನೊಳಂ ನೆನೆಯದಂತು ಮಾಡೆನಗಹಾ॥**

ಎಂದೂ

" ನೀನಲ್ಲದನ್ಯವಸ್ತುಗಳೆಲ್ಲಂ ಹೇಯಂಗಳೆಂಬ ತತ್ತ್ವೋಪಾಯಮ ನೆನಗೀವುದು " ಎಂದೂ

**ನಿತ್ಯಸುಖಮಾತ್ಮರೂಪನೆ।**

ನಿತ್ಯಸುಖಂ ಮೋಹರೂಪನೆಂಬ ವಿವೇಕಂ ॥

ಸತ್ಯಸ್ವರೂಪಮದರೊಳ।

ಗತ್ಯಂತಾನುಭವವಿಭವಮಕ್ಕೆನಗರ್ಹಾ ॥ ಎಂದೂ

ಅರ್ಹತ್‌ಪರಮೇಶ್ವರನನ್ನು ಬೇಡಿಕೊಳ್ಳುವನು. ಆ ಮೇಲೆ ಬಾಳ ಚಂದ್ರಾಪರನಾಮಧೇಯರಪ್ಪ ಶ್ರೀನಾಗಭಟ್ಟಾರಕರ ಪಾದಕಮಳ ಗಳಿಗೆ ನಮಸ್ಕರಿಸುವನು. ಅವರ ಅರವಿಂದಸ್ಮೇರಮುಖವು ಹೃದಯ ಸಂಶುದ್ಧಿಯನ್ನು ತಿಳಿಸುತ್ತಿತ್ತು, ಶಾಂತರಾಸಾಧೀನವಾದ ಮಾನ ಸವು ಸಮಾಧಾನವನರುಹುತ್ತಿತ್ತು, ತನುವು ಶಾಖಾಲೀಲೆಯನ್ನು ಪಾಲಿಸುತ್ತಿತ್ತು, ಕಣ್ಣು ಕಾರುಣ್ಯಸ್ರೋತಗಳನ್ನು ಸೂಸುತ್ತಿತ್ತು. ರಾಜನನ್ನು ಕಂಡು 'ಭಾವಿಜಿನನಪ್ಪ ಜೀವಕ್ಕಾವುದು ವಿಸ್ಮಯವೊ!' ಗುರುಗಳು ಬಗೆದರು; 'ಕಿಡುವಿಂದ್ರಿಯಸುಖಮನೇಂ ಪಿಡಿವರೆ? ನಿಮ್ಮಂದಿಗರ್ ಕಿಡದ ಪರಮಾತ್ಮಸುಖಮನೆ ಪಿಡಿವರು' ಎಂದರು. ಅರಸನು ಕೈಮುಗಿದು ತಲೆಬಾಗಿ 'ನಿಮ್ಮೀ ಪದಾಂಬುರುಹಂ ತರ್ಪುದು ದೂರದಿಂ ನೆನೆಯೆ ಮುಕ್ತಿಶ್ರೀಯಂ' ಎಂದೆರಗುವನು. ದೀಕ್ಷೆಯನ್ನು ಹೊಂದುವನು; ಕೇಶಕುಂಚನವಾಗುವದು. ಈಗ ಅವನಿಗೆ ಬೇಕಾದುದು ಮುಖ್ಯವಾಗಿ ಆತ್ಯಂತಿಕ ಸೌಖ್ಯ. ಸಂಸೃತಿ ಸುಖವು ಸಾಕಾಗಿತ್ತು; ನಿರ್ವೃತಿಪದಸೌಖ್ಯವು ಬೇಕಾಗಿತ್ತು. ಆದಕ್ಕೇ ಆ ವೈರಾಗ್ಯಪೂರ. ಕ್ಷಮೆ, ಮಾರ್ದವ, ಶೌಚ, ಆರ್ಜವ, ಸತ್ಯ ಸಂಯಮ, ಉಪಶಮ ರಸತ್ಯಾಗಾದಿಗಳ ಅಭ್ಯಾಸವಾಗುವದು. ವಿಷಯಸುಖಾನುಭವವಾಗಬಾರದು; ಪರಿಸ್ಪಂದಾಧೀನವಾದ ಅಸ ಮಾಧಾನವು ಹೊದ್ದಬಾರದು; ಎಂದು ಅವನ ಪ್ರಯತ್ನ. " ನಿರು

ದ್ಯಮದಿನಾರ್ಗಂ ಸ್ಪೈಪುಕ್ಯೈಸಾರ್ಗುವೇ?'' ಸಂಯಮವೇ ಸುಖವಾಯಿತು. ಚಾರಿತ್ರಶುದ್ಧಿಯನಪೇಕ್ಷಿಸಿ ದರ್ಶನಜ್ಞಾನಚಾರಿತ್ರ ಉಪಚಾರ ಇಂತು ಚತುರ್ವಿಧ ವಿನಯತಪಾಚರಣೆಯಾಯಿತು. ಈಗ ಅವ್ಯಕ್ತಪ್ರಾಣಾಪಾನಪ್ರಚಾರನಾಗಿ ಗಾತ್ರ ನೇತ್ರ ಪರಿಸ್ಪಂದಾದಿ ವಿಕಾರರಹಿತನಾಗಿದ್ದರಿಂದ ಅರಸನಲ್ಲಿ ಆರ್ತ ರೌದ್ರಗಳು ಹೋಗಿ ಧರ್ಮಶುಕ್ಲಗಳು ಸ್ಥಿರವಾದುವು. ನಿರಂತರಧ್ಯಾನ ನಡೆಯಿತು. 'ಎನಿತು ಕಾಲಂ ತೀವಿದೊಡಂ ತೀವದು, ಆವಗಂ ತೊರೆಯಲೊಡಂ ತೀವುವುದು''. ಆಶಾಗರ್ತದ ಜೀವನವಿಪರೀತವಾದ ಸ್ವರೂಪವು ಅನುಭವಕ್ಕೆ ಬಂದಿತು. ಆಸೆಯೆಂಬ ಮಹಾರೋಗಕ್ಕೆ ತ್ಯಾಗವೆಂಬ ಕಷಾಯವೇ ಮದ್ದೆಂಬುದನ್ನು ಕಂಡನು.

'ಮನದೊಳ್ ಪೂರ್ವಾನುಭುಕ್ತಪ್ರಿಯಲಲನೆಯಲಾವಣ್ಯಮಂ<br>ರೂಪುಮಂ, ಯೌ ।<br>ವನಮಂ, ಸ್ರಕ್ಚಂದನಾಲೇಪನಪರಿಮಳಸಂಸಕ್ತಿ, ಸಂಭೋಗ<br>ಶಯ್ಯಾ ॥<br>ಸನಮಂ, ಸಿವ್ಯಾಕುಳಂ ಪಂಬಲಿಸದೆ ಮದನವ್ಯಾಳಶುಂಡಾಳ<br>ದಂತಾ ॥<br>ಶನಿಯಂ ಕಿಳ್ತಿಕ್ಕೆ ತತ್ಸಂಯಮಿಗೆ ಸಮನಿಸಿತ್ತುತ್ತಮ<br>ಬ್ರಹಚರ್ಯಂ ॥

ಮೂಲಗುಣಗಳಿಂದ ದಶಧರ್ಮಗಳನೇರಿಸಿಕೊಂಡು, ಷೋಡಶ ಭಾವನೆಗಳನ್ನು ಭಾವಿಸಿ, ದ್ವಾದಶಾನುಪ್ರೇಕ್ಷೆಯನ್ನು ತಾಳಿ, ಚತುರ್ವಿಧ ಶುಕ್ಲಧ್ಯಾನ ಸಮಾಹಿತನಾಗಿ, ಒಂದು ತಿಂಗಳಲ್ಲಿ ವೈಶ್ರವಣನು ಅಹಮಿಂದ್ರನಾದನು. ಯಾವ ಸಾರ್ವಭೌಮನಿಗೂ ದೊರೆಯಲಾರದ ಸಂಪತ್ತಿಯು ಅವನಿಗೆ ದೊರೆಯಿತು.

ಪೂಸದಸೌರಭಂ, ತನದಮೆಯ್ಸಿರಿ, ಬಾಡದದಾಮಂ,
ಉಟ್ಟೊಡಂ ।
ಮಾಸದಸೀರೆ, ಧಾತುಮಳಮಿಲ್ಲದೊಡಲ್, ಪರಿಪೂರ್ಣ
ಯೌವನಂ, ॥
ಲೇಸೆನಿಸಿರ್ದರೂಪು, ಶುಭಲಕ್ಷಣಂ ಎಂಬಿವಸಪ್ಪುಕೈಯುದ್ದ ಅ ।
ನಾಯಾಸದಿಂ ಈಸಿದಂ ಕಡೆವರಂ ದಿವಿಜಂ ಪರಮಾಯುರ
ಬ್ಧಿಯಂ ॥

ಮಾನುಷಾನಂದವೆಲ್ಲಿ ಈ ಅಹಮಿಂದ್ರವೈಭವಾನಂದವೆಲ್ಲಿ. ಆದರೆ ಪರಮಸುಖವು ಇದಲ್ಲ. ಇದು ಕೇವಲ ವಿದೇಹಸೌಭಾಗ್ಯ. ಹೀಗೆ ಅನೇಕಜನ್ಮಸಂಸಿದ್ಧವಾದ ಜೀವವು ಮಲ್ಲಿಜಿನಾಪತಾಗಕ್ಕೆ ಪ್ರಸ್ತಾಪಿಸುತ್ತಿತ್ತು. ಇತ್ತ ಮಿಥಿಳಾಪುರದ ಕುಂಭಮಹಾರಾಜ ಪ್ರಭಾವತಿ ಮಹಾದೇವಿಯರ ಕಣ್ಣೆದುರು ಆರುತಿಂಗಳವರೆಗೆ 'ಮನಸಿಜವಶೀಕರಣಪರ್ವ'ದಂತೆ ಹೊನ್ನಿನಮಳೆಯಾಯಿತು ಗರ್ಭಾವತರಣಕಲ್ಯಾಣಕ್ಕಾಗಿ. ಜಿನಾಂಬಿಕೆಯ ಪಾತ್ರವನ್ನು ಸಿಂಗರಿಸಿ ಸಿದ್ಧಗೊಳಿಸಲು ದೇವತೆಯರು ಸುಳಿದಾಡಹತ್ತಿದರು. ಗರ್ಭಶುದ್ಧಿಯು ಸಾಗಿತು. ಪ್ರಭಾವತಿದೇವಿಯು ಕಾಣುವ ಕನಸುಗಳನ್ನು ಕಂಡಳು. 'ಆರ್ನಿಸ್ನಂದದಿಂ ಸುಂದರಿ ಕನಸುಗಳಂ ಕಾಣ್ಬಸ್ಸೈಪಿಂಗೆನೋಂತರ್'' ಎಂದು ಕನಸು ಕೇಳಿ ಕುಂಭನೃಪಾಲನೆಂದನು ಸಂತೋಷದಿಂದ. 'ನೀನು ತೀರ್ಥಕರಜನನಿ' ಎಂದು ಹೇಳಿದನವಳಿಗೆ. ಅವಳ ಸುಖಕ್ಕೆ, ನಗೆಗೆ, ಲಾವಣ್ಯಕ್ಕೆ ಪಾರಾವಾರವಿಲ್ಲ. ಆದರೆ, ಮೊಲೆಗಾಗಲಿ, ಮೊಗಕ್ಕಾಗಲಿ, ಬಾಪೆಗಾಗಲಿ, ವಳಿತ್ರಯಕ್ಕಾಗಲಿ, ತನೂದರಕ್ಕಾಗಲಿ, ತನುಪಿಗಾಗಲಿ ಮೊದಲಿಸ ವಿಲಾಸವೇ ಇತ್ತಲ್ಲದೆ ವಿಕಾರವಿರಲಿಲ್ಲ. ಗರ್ಭಚಿನ್ಹಗಳು ತೋರುವದಿಲ್ಲ.

ಶಾಂತಮುನಂ ಜಿನಾರ್ಭಕಂ ನೆಲಸಿರೆ ಗರ್ಭಪಂಕಜದೊಳ್ ಅಂಗ
ನೆಗೆ ಅಂಗವಿಕಾರಮುಕ್ಕುಮೇ?''

ಹೀಗೆ ಒಂಬತ್ತು ತಿಂಗಳು ತುಂಬಿ ಮಾರ್ಗಶೀರ್ಷ ಶುದ್ಧ ಏಕಾದಶಿಯಲ್ಲಿ ಮಲ್ಲಿಜಿನನು ಹುಟ್ಟುವನು. ಪಂಚಭೂತಗಳಲ್ಲಿ ಅಪೂರ್ವ ವಿಭೂತಿಯುಂಟಾಗುವದು. ಗೊಂದಣ ಪೆಕ್ಕಣ ಕುಣಿವರು; ಗುಡಿ ಕಟ್ಟುವರು; ಬದ್ದವಣ ಹೊಯ್ಯುವರು; ಮುತ್ತಿನ ರಂಗವಲ್ಲಿಯು ನಿಕ್ಕುವರು; ಪಟವಾಸವು ಸೂಸುವದು; ಮಂಗಳಗೀತೆಗಳು ಕೇಳ ಬರುವವು. ಸಹಜ ಪುಷ್ಪವೃಷ್ಟಿಯಾಗುವದು. ಜಿನೋತ್ಪತ್ತಿಯಾದುದನ್ನು ಸೂಚಿಸುವಂತೆ 'ನಾಕವಿಭವಶ್ರೀ ವಿಸ್ಮಯಂಬಟ್ಟು ತೂಗುವವೋಲ್ತನ್ನ ಕಿರೀಟಮುಂ' ವಾಸವನ ಆಸನವು ನಡುಗುವದು. ಜನ್ಮಾಭಿಷವಕಲ್ಯಾಣದ ಸಿದ್ಧತೆಯು ಭರದಿಂದ ಸಾಗುವದು. ಇಂದ್ರನಾಸೆ ಬರುವದು; ಅಮರಸ್ತ್ರೀಯರ ನಾಟ್ಯನಡೆಯುವದು. ಐರಾವತವನ್ನೇರಿ ಶಚಿಸಮೇತನಾಗಿ ಸೌಧರ್ಮೇಂದ್ರನು ಬರುವನು. ಜಿನಜನನದಿಂದ ಮಿಥಿಲೆಗೆ ಅಪೂರ್ವ ವೈಭವವು ಪ್ರಾಪ್ತವಾಗಿತ್ತು. 'ನಂದನವಿಂತು ಸುಂದರಮೆ?' ಎಂದು ಸುರಸೇನೆಯೆಂದರೆ, 'ಮದ್ವಿಮಾನವಿಮಾಮಂದಿರದಂತು ಕಣ್ಗೊಳಿಸವು' ಎಂದು ಸುರೇಶ್ವರನೆನ್ನುವನು. ಅಂತೂ ನೋಡಿದಾಕ್ಷಣವೆ ಅವರ ಈಕ್ಷಣಗಳನ್ನೆ ಸೆರೆಗೆಯ್ದು ಬಿಟ್ಟಿತು. ಶಚಿಯು ಜಿನಜನನಿಯನ್ನು ನಿರ್ಭರಭಕ್ತಿಯಿಂದ ಮೂರು ಸೂಳು ಬಲವಂದು ಅವಳ ಮಗ್ಗುಲಲ್ಲಿ ಮಾಯಾಶಿಶುವನ್ನಿರಿಸಿ ಜಿನಶಿಶುವನ್ನೆತ್ತಿಕೊಂಡೊಯ್ದಳು. ಇಂದ್ರನಿಗೆ ಕೊಡುವಳು. 'ಪರಮಪ್ರೀತಿಯಿನತಿನಿರ್ಭರಭಕ್ತಿ'ಯಿಂದ ಅವನ ಪಾದಗಳನ್ನು ಇಂದ್ರನು ತನ್ನ ಕಿರೀಟದಲ್ಲಿರಿಸಿಕೊಳ್ಳುವನು. ಇಂದ್ರನ ಅಷ್ಟೈಶ್ವರ್ಯವೂ ಜಿನಶಿಶುವಿಗೆ ಸಮರ್ಪಿತವಾಗುವದು. ಚತುರಂಗ ಬಲವು ಮಹೋತ್ಸವಕ್ಕಾಗಿ ಹೊರಡುವದು. ಗಂಧರ್ವರು ಬರುವರು.

ಪುಷ್ಪಬಾಣಂಗಳಿಂ ಪಡೆದಂ ಪೆಣ್ಣಡೆಯುಂ ಮನೋಜನೆನೆ ನೇಪಥ್ಯಂ ಬೆಡಂಗಪ್ಪ ' ನಾನಾನರ್ತಕಿಯರು ಬರುವರು.

ವಿದಳತ್‌ಚಂಪಕವರ್ಣವಾದ, ಶಿಖಿಕಂಠಚ್ಛಾಯೆವೆತ್ತ, ಇಂದ್ರಚಾ।
ಪದ ರೂಪಂ ತಳೆದ, ಅಭ್ರಕಭ್ರಮೆಯನಾಳ್ದ, ಉತ್ಪಾಟಳಪ್ರಾಂಶು
ತ ॥

ಳ್ತ, ದಳತ್ ಕಿಂಶುಕಶೋಣಮಪ್ಪ, ಸಮಸದ್ವರ್ಣ ಪ್ರದೇಶಂ
ಗಳಿಂ ॥

ದಿದೆ ಚೆಲ್ವಾದುದು ಮಂದರಾದ್ರಿ ಮದಸಂ ವರ್ಣಕ್ರಮಂ
ಗೆಯ್ದವೋಲ್ ॥

ನಾಲ್ಕುನಾಲ್ಕು ಜಿನಮಂದಿರಗಳಿಂದ ಸುಂದರವಾಗಿತ್ತು ಮಂದರ. ಅಲ್ಲಿಯ ನಂದನವು ಕಂತುದಿಗ್ವಿಜಯಯಾತ್ರಾಸ್ಕಂದನದಂತೆ ಮನಂ ಗೋಳಿಸುತ್ತಿತ್ತು. ಮನಃಪವನವೇಗಿಯಾದ ಶಕ್ರನ ವಿಕ್ರಿಯಾಗಜವು ಮುಂದರಿಯಿತು. ಪಾವನ ಮಂದಮಾರುತವು ಬೀಸಿತು. ಶಿಲ್ಪಿಗಳ ಕಲ್ಪಪತಿಯು ಅಭಿಷೇಕಮಂಡಪವನ್ನು ಸಮೆದಿದ್ದನೆಂದಮೇಲೆ ಕೇಳುವದೇನು? ಮುತ್ತಿನ ಸೂಸಕ, ಮರಕತದ ತಿಂಗಣಿ, ಹೊನ್ನ ಘಂಟೆ, ತಳ್ತೆತ್ತಿದ ಕೇತುಸಂತತಿ, ತೊಡರಿಸಿದ ಚಿತ್ರವಿತಾನ, ಓಳಿಯಿಂದ ಸುತ್ತಿದ ತೋರಣ, ಪುದಿದ ಪೂವಲಿ, ರನ್ನದ ರಂಗವಲ್ಲಿ! ಪೂರ್ವಾಭಿಮುಖವಾದ ಸಿಂಹಾಸನದಲ್ಲಿ ದೇವಾರ್ಭಕನು ಕುಳಿತನು; ಉತ್ತರ ದಕ್ಷಿಣಾಭಿಮುಖರಾಗಿ ಸೌಧರ್ಮೇಂದ್ರನೂ ಈಶಾನೇಂದ್ರರೂ ಕುಳಿತುಕೊಳ್ಳುವರು. ಉಳಿದವರು ತಮ್ಮತಮ್ಮ ಸ್ಥಳಗಳಲ್ಲಿ. ಕನ್ನಡಿಕಳಶ ಅಕ್ಷತೆಮಾಲೆ—ಸರ್ವವೂ ಸಿದ್ಧವಾಗುವದು. ಅಮರಾಪರು ಜಿನೋತ್ತಮಾಂಗದಲ್ಲಿ ದುಗ್ಧವಾರಿಧಾರೆಯನೆರೆವರು. ಕ್ಷೀರ ಸಾಗರದವರೆಗೆ ಅದು ಹರಿದುಹೋಗುವದು. 'ಭುವನದೊಳೆನ್ನ ಜೀವನಮೆ ಪಾವನಂ' ಎಂದು ತುಂಗತರಂಗಭಂಗದಿಂದ ಕ್ಷೀರಸಾಗ

ರವು ತುಳುಕಾಡಿತು. ಜನ್ಮಾಭಿಷೇಕವಾಗುವದು. ಗಂಧೋದಕ ಸ್ನಾನವಾಗುವದು. ಸುರಪತಿಯು ಜಿನನಪೂಜೆಯನ್ನು ಮಾಡಿ 'ಪಾಪವಿಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳವಾಯ್ತು' 'ನಿನ್ನೊಳಭೇದವಾದ ಕೊಂಡಾಟದನಂತಸೌಖ್ಯಮನೆ ಮುಚ್ಚಿದಮರ್ಚರ್ಗೆ ಯೊಳ್ಕೊಡರ್ಚು' ಎಂದು ಬೇಡಿಕೊಳ್ಳುವನು. ಜಿನಪದವಿಯು ಅನಂಗನನ್ನು ವಿಸಾರಿದುದು. ಸುರೇಂದ್ರನಿಗೂ ಮೇಲಿನದು. ಜಿನ ಶಿಶುವಿಗೆ ಸಕಲಸುರಶೃಂಗಾರವಾಗುವದು.

ಎಂಥರೂಪ!

ಎಮೆಯಿಕ್ಕುವರುಂ ನೋಡಿದೊ।
ಡೆಮೆಯಿಕ್ಕಲ್ಕರಿವರೆನಿಪ ಜಿನರೂಪಮನಂ।
ದಮರಾಂಗನೆಯರ್ನೋಡಿದ।
ರೆಮೆಯಿಕ್ಕದುದಿವರ್ಗೆ ಸಫಳಮಾಯ್ತೆಂಬಿನೆಗಂ॥

ಆ ಮೇಲೆ ಮಿಥಿಳಾಪುರಕ್ಕೆ ಜಿನಶಿಶುವನ್ನು ಮರಳಿ ತರುವದಾಗುವದು. ದಿವಿಜಶಿಲ್ಪಿಗಳು ವಿರಚಿಸಿದ ಕರುಮಾಡದ ಮುಂದಣ ನಾಟ್ಯಮಂಡಪದ ಮಣಿಕುಟ್ಟಿಮದ ನಡುವಣ ಸಿಂಹಪೀಠದಲ್ಲಿ ಬಾಲಕನನ್ನಿಟ್ಟೊಡನೆ ಕುಂಭ ಪ್ರಭಾವತಿಯರು ನೋಡಿ ಆನಂದಪಡುವರು. 'ತ್ರಿಜಗನ್ನಾಥಂಗೆ ತಾಯ್ತಂದೆಗಳೆನಿಸಿದ ಪೈಪಿಂಗಡಪರ್ವದರು' ಎಂದ ಮೇಲೆ ಅವರ ಹಿಗ್ಗಿಗೆ ಮೇರೆ ಇದೆಯೇ? ಜಾತಕರ್ಮೋತ್ಸವು ಇಲ್ಲಿ ನಡೆಯಿತು. ಸ್ವರಸಂಯೋಗದೊಳಾದ ಎಲ್ಲ ರಾಗಗಳು, ದೇಶೀಯ ರಾಗಗಳು, ಸ್ವರಭಾಷಾವಿದರಿಂದ ಆದ ಬೇರೆ ರಾಗಗಳು, ತಜ್ಞರು ತಲೆದೂಗುವಂತೆ ಹಾಡಲಾದುವು. ಅಮರ ಕನ್ನೆಯರು 'ಕಾಮನ ಬಿಲ್ಲಜೇವೊಡೆಯುಮೆಲ್ಲುಲಿ'ಯಂತೆ ಮಧುರವಾಗಿ ತಾಳಲಯಾನುಗವಾಗಿ ವಸ್ತುಗೀತೆಗಳನ್ನು ಹಾಡಿದರು. ಗತಿಭೇದ ಲಯಭೇದವೊಪ್ಪು

ವಂತೆ ವಾದಕರು ವಾದ್ಯಗಳನ್ನು ಬಾಜಿಸಿದರು. ಸುರಪತಿಯು ತಾಂಡವನೃತ್ಯವನ್ನಾಡಿದನು.

ಭರತಾಗಮಕ್ಕೆ ಟೀಕಂ।
ಬರೆದಂತಿರೆ ತಾಂಡವಕ್ಕೆ ಲಕ್ಷ್ಯಮನಂದಂ।
ಬತಿರೆ— —

ನರ್ತಿಸಿದನು. 'ಆಗಸದೊಳ್ ದಿಶಾವಳಯದೊಳ್ ಧರೆಯೊಳ್ ತನದೊಂದೆ ರೂಪುನೂರಾಗಿರೆ—ವಿಕ್ರಿಯಾವಿಭವಮುಚ್ಚ್ಚರಿಯಾಗಿರೆ' ಶಕ್ರನಾಡಿದನು.

ಕಿವಿಗಿಂಪಂ ಕರೆಯುತ್ತುಮಿರ್ಪರಸಗೀತಂ, ಗೀತದೊಳ್ತಳ್ತುಪೊ।
ಣ್ಮುಪವಾದ್ಯಂ, ರಸಗೀತವಾದ್ಯವೆರಡರ್ಕಂ ನೇರ್ಪಡಂ ತೋರ್ಪ
ತಾಂ॥
ಡವಭೇದಂ, ಕುಡೆ ದೇವಮರ್ತ್ಯಸಭೆಗತ್ಯಾನಂದಮಂ
ಲೋಚನೋ।
ತ್ಸವಮಂ ಶಕ್ರನಿನಂದದೇನೆಸೆದುದೋ ಸಂಗೀತಕಂ ಕೌತುಕಂ॥

ಆ ಮೇಲೆ ಮಲ್ಲಿನಾಥನೆಂದು ನಾಮಕರಣವಾಯಿತು. ವಾಸವನು ನಿಜನಿವಾಸಕ್ಕೆ ಹೊರಟುಹೋದನು. ಬಾಲ್ಯವಾಯಿತು. ಕೌಮಾರ್ಯದಲ್ಲಿಯೇ, 'ಅರಿಯದವಿದ್ಯೆಯಿಲ್ಲ'ವೆಂಬ ನೆಗಳ್ತೆ ಪೊಗಳ್ತೆಯಾಯಿತು. ಚರಮದೇಹದ ಮೆಯ್ಸಿರಿಯನ್ನಂತೂ ಹೊಗಳುವದೇನು? 'ಇದು ಲಕ್ಷ್ಯಂಲಕ್ಷಣಕ್ಕೆ, ಆಗರಮಿದು ಶುಭಚಿಹ್ನಕ್ಕೆ, ಸೌಂದರ್ಯಸಸ್ಯಕ್ಕಿದು ಸುಕ್ಷೇತ್ರಂ' ಎನುವಂಥ ಸುಭಗಾಕಾರ. ಆದರೆ ಕಾಮನ ಪುಷ್ಪಬಾಣಗಳು ಅವನ ಮೈಯಲ್ಲಿ ನಾಟಲೊಲ್ಲವು; ಮದನನೂ ವಿವೇಕಿಯಾಗಿ ಅವನಿಗೆಸೆಯದೆ ಇದ್ದನು. ತಂದೆತಾಯಿಗಳಿಗೆ ಮಗನ ಮದುವೆಯಾಗಬೇಕೆಂಬಾಸೆ. ಅವನನ್ನು ಹಡೆದವರಾದರೂ 'ತನಯ ಸಂತಃಸಾರಮಂ ಬಲ್ಲರೇ?' 'ಜಿನಪತಿ ದಂಪತಿಯೆನಿಪನೆ?' ಚಿಗು

ರೆಯೂ ಬಯಲುದೊರೆಗೆ ಬಾಯಿಬಿಡಬಹುದು. 'ಇಂದ್ರಿಯಗಳ ಸುಖಂ ಸುಖವೆಂಬ ವಿವೇಕಿಯಲ್ಲದಂ ಪರಿಗುಂ—ಅನಂತಬೋಧನಿಧಿ ನಿತ್ಯಸುಖೋನ್ಮುಖಂ ಈ ಕುಮಾರಕಂ ಪರಿಣಯನೋತ್ಸವಕ್ಕೆ ಬಗೆ ದರ್ಪನೆ—ದರ್ಪಕದರ್ಪಭಂಜನಂ?'. ತಂದೆಗೆ ಒಂದು ಚಿಂತೆ—ಕರ್ತವ್ಯವೆಂದು. ಮಗನಿಗೆ ಬೇರೊಂದು ಧ್ಯಾನ—ಸ್ವಭಾವಸಹಜವೆಂದು.

**ಕರುವಿಟ್ಟುಂ ತಿಟ್ಟವಿಟ್ಟುಂ ಕಡೆದುಂ ಎರಗಿಯುಂ**
**ಪೋಲಿಸಲ್ ಬಾರದಾ ಸುಂ |**
**ದರರೂಪಂ,** ಕಂಡು ಕಣ್ಗೊಲ್ಲೆತ್ತಿಳಸಿ ಪೆಸರಪೆಂಡಿರ್ಕುಮಾರಂ
ಕರಂ ತೋ ||
ಳ್ಪಿರಗಂ ನಿಶ್ರೇಯಸಶ್ರೀವನಿತೆ ಸಮನಿಸಿತ್ತಾತನೇಗೆಯ್ವನ್
ಎಮ್ಮಂ |
**ಪುರುಷರ್ ತಾನೊಲ್ದರೂಪಲ್ಲದೆ ಪೆರಪೆರವಂ ಸೊಂಕಿಯುಂ**
**ಕಾಣರಲ್ತೇ ||**

ಹೆಣ್ಣುಗೊಂಬೆಯನ್ನು ನೋಡಿ, ಸ್ತ್ರೀಲಿಂಗಶಬ್ದವನ್ನು ಕೇಳಿ, ಸೀರೆ-ಸೆರಗಿನ ಗಾಳಿತಾಕಿ—ಕಂಪಿತರಾಗುವ ಅನಂಗದಾಸರಿಗೆ ಪುರುಷ ಸಂಜ್ಞೆಯೇ ಯೋಗ್ಯವಲ್ಲ ಎನ್ನಬಹುದು. ಇತ್ತ ವಿವಾಹದ ಸಿದ್ಧತೆ ನಡೆದಿತು. ಅತ್ತ ಕುಮಾರನು ತನ್ನ ಸಿದ್ಧತೆ ನಡೆಸಿದನು.

ಅವನು ವಿವಾಹಮಂಡಪವನ್ನು ನೋಡಿ ಅಪರಾಜಿತವಿಮಾನದ ನೆನಪಾಗಿ ನಿರ್ವೇದಪರನಾಗಿ ಚಿಂತಿಸುವನು:— 'ಜನನೀಜಠರಾಂಧ ಕೂಪದಲ್ಲಿ ಬೀಳುವದನ್ನು ತಪ್ಪಿಸಬೇಕು; ಮುಪ್ಪಡಸದಮುನ್ನ ಮೋಹಮಲ್ಲನನ್ನು ಮುರಿದಿಕ್ಕಬೇಕು;' 'ಇನ್ನೆವರಂ ಜವಂಗೆ ಪೇಡಿಯಾದೆಂ, ಅಂತಕಂಗಿದಿರನಾಂತು ಅವನಂ ತವೆವೋದಿ ಜಯಾಂಗನೆಯೊಳ್ ಸೇಸೆಗೊಳ್ವೆಂ ನೆರೆವೆಂ; ಏವೆನೊ ಮತ್ತಿನ ಪೆಣ್ಣಂ'ಎಂದು

**'ತಾಂ ತನ್ನನೆ ತಾನೆ ಸಾಧಿಸುವ ಧೀರತೆಯಃಂ ತಳೆದಂ'.** ಜವಂ ಅಳ್ಕಮೆಯಿವಹಲಿಲ್ಲ, ಕಾಲಸು ಜವಂಗೆಡಲಿಲ್ಲ; ಕಣ್ಕಿವಿಮೂಗುಮೈಗಳು ಜವಜವಕ್ಕೆ ಸಲ್ಲದಾದವು; ಯೌವನವು ಓಸರಿಸಿತು; ಕುತ್ತದ ಪಿತ್ತ ಹುರಿದುಹೋಗಲಿಲ್ಲ; ಕೇಡಿಗೆ ಕೇಡಾಗಲಿಲ್ಲ—ಐಹಿಕಸುಖವ್ಯಾಮೋಹದಿಂದ ಜಡಾತ್ಮರು ಸಾಧಿಸಿದ್ದೇನು? ದೇಹಸಂಬಂಧದಿಂದ ದೇಹಿ ಜಡನಾದ! ಕೃತಾಂತನಿಗೆ ಯಾರು ಈಡು? ಯಾವ ಯೋನಿಯಲ್ಲಿ ಹುಟ್ಟಿದರೇನು? ಯಾವ ಗತಿಯಾದರೇನು? ದಶಸಾಗರೋಪಮ ಆಯುಷ್ಯವುಳ್ಳವರನ್ನೂ ಜವಜೆಟ್ಟಿಯು ನೊಗವುರಿಯದೆ ಕೊಲ್ಲುವನು. ಪಾತಕಿಯಾದ ಜವನಿಗೆ ಕರುಣೆಯಿಲ್ಲ. ಜವನ ದಾಳಿ ಮುಟ್ಟದ ಎಡೆಯೇ ಆವೆಡೆಗೂ ಇಲ್ಲ. ಎಷ್ಟು ಕಾಲ ಎಷ್ಟು ಜನ ಕೊಂದು ತಿಂದರೂ ಜವನ ಹಸಿವೆ ಹಿಂಗದು. ಅವನ ದಾಡೆಯು ಅಹಮಿಂದ್ರರನ್ನೂ ತುತ್ತುವದು. ಮಾನವ ಜನ್ಮವಿರಲಿ, ದೇವಗತಿಯಾಗಿಯೂ ಏನು? 'ವಿವೇಕಿಗೆ ಅನುರತ್ವಂ ಹೇಯಂ! ಆದೇಯಮೇ?' ಎಲ್ಲಿಯು ಸುಖಕ್ಕೂ ಸಾವಿದೆ.

ತವಿಲುಳ್ಳಿಂದ್ರಿಯಸೌಖ್ಯದಿಂ ತಣಿವೊಡೀ ಭೂಲೋಕಮೇಂ
ನಾಕಮೇಂ।
ಜವನಿಂದಪ್ಪ ಪರಾಭವಂ ಬಿಡದು ಬೆನ್ನಿಂದ+**ಎಂದೊಡೇ
ಬಾಳ್ತೆಯೋ॥**
**ದಿವಂ ಆತ್ಯಂತಿಕಸೌಖ್ಯವಲ್ಲದುದು** ಎಲ್ಲಿರ್ದುಂಡುಮೇಂ,
ಇಲ್ಲಿ ಪು।
ಟ್ಟುವುದೇ ಪುದ್ಗಲಕಾರ್ಯಮಲ್ಲದ ಶರೀರಂ—ದೇವರೇಂ
ಮರ್ತ್ಯರೇಂ॥
ಅನುಭೂತಕ್ಷಣಂ ಉತ್ತರಕ್ಷಣಂ—ಅಪಾರ್ಥಂ ವರ್ತಮಾನ
ಕ್ಷಣಂ।

ತನಗಕ್ಕುಂ ಸುಖಹೇತುವೆಂದೊಡೆನಿತಾನುಂ ಕಾಲಮಿರ್ದುಂ
ಪ್ರಿಯೋ ॥
ಜನಮೇಂ, ಸ್ವರ್ಗದೊಳಾವುದೊಂದು ಗತಿಯೊಳ್ ಜೀವಕ್ಕೆ
ಬಾಹ್ಯೇಂದ್ರಿಯ।
ಕ್ಕೆನಿದೆಂಬಂತಿರೆ ತೊರ್ಪುದೇನದೆ ಸುಖವ್ಯಾಮೋಹಮಂ
ಮಾಡುಗುಂ ॥

ಎಂದಮೇಲೆ "ಅಧೋಭೂಮಿಗಳೆನಿಸಿದೇಳು ನರಕಗಳ ದುಃಖವನ್ನು ಬಣ್ಣಿಸಬಾರದು. ವನಸ್ಪತಿಯಾದರೂ ಅಂತ ಮುಹೂರ್ತದಲ್ಲಿ ಅರುವತ್ತಾರು ಸಾಪಿರ ಮುನ್ನೂರು ಮೂವತ್ತಾರು ಸಲ ಸತ್ತು ಹುಟ್ಟುವದು. ಚತುರ್ಗತಿ ಸ್ವಭಾವವನ್ನು ಭಾವಿಸಿದಂತೆಲ್ಲ ಪರಮ ಸುಖದ ನೆಲೆಯೇ ಅಲ್ಲಿ ತೋರದು." ಹೀಗೆ ಭಾವನೆ ನಡೆದಿರಲು ಲೋಕಾಂತಿಕ ದೇವರು ಬಂದು 'ಎಂಟು ಪ್ರಕೃತಿಗಳನ್ನು ಕಿಡಿಸುವ' ಉದ್ಯೋಗಕ್ಕೆ ತೊಡಗಲು ಸೂಚಿಸುವರು. ಪರಿನಿಷ್ಕ್ರಮಣ ನಿರ್ವಾಣದ ಗಂಭೀರ ಭೇರೀನಿನಾದವು ಇಂದ್ರನಿಂದ ಮೊಳಗಿಸಲಾಗುವದು. ಮುಕ್ತಿವಧೂ ವಿವಾಹಗೇಹಾಜಿರದಂಥ ಸಿವಿಗೆಯನ್ನು ಮಲ್ಲಿನಾಥ ನೇರಿದನು. 'ಬಯಸಿದ ವಸ್ತುವಂ ಬಯಸಿದಾಗಳೆತರ್ಪುದು ದೇವಕೋಟಿ!' ಇನ್ನು ಮಲ್ಲಿಜಿನೇಂದ್ರ ಮಹಾನುಭಾವವನ್ನೆಷ್ಟು ಹೊಗಳಬೇಕು? ಜೈನ ದೀಕ್ಷೆಯನ್ನು ಕೈಕೊಂಡುದಾಯ್ತು. ಷಷ್ಠೋಪವಾಸನಿಯಮನಿಯಮಿತನಾಗಿ ಮಲ್ಲಿಜಿನನು ಧ್ಯಾನಸ್ಥನಾದನು.

ಮೀನಕ್ಷೋಭವಿಹೀನಮಾನಸದವೋಲಚ್ಛಾನಸಂ, ಮಂದರಂ।
ತಾನೆಂಬಂತೆ ವಿನಿಶ್ಚಳಂ ತನು,ಶರಚ್ಚಂದ್ರಾಂಶುವೋಲ್ ನಿರ್ಮಳ॥
ಧ್ಯಾನಂ ಕೂಡೆ ಸಮಾಧಿಸೌಖ್ಯದೊಳಿರ್ಪನ್ನಂ,
**ಮನಃಪರ್ಯಯ।**
**ಜ್ಞಾನಂ ತನ್ಮುನಿಪಂಗೆ ಪುಟ್ಟಿದುದು ನಿರ್ವಾತಪ್ರದೀಪೋ**
**ಜ್ಜ್ವಳಂ ॥**

ಆ ಮೇಲೆ ಚತುರ್ಥಜ್ಞಾನಧರನಾಗಿ ಪಾರಣಾದಿನದಲ್ಲಿ ಚರ್ಯೆಗೆ ಹೊರಡುವನು. ನಂದಿಷೇಣಕ್ಷಿತಿಪತಿಯ ಮನೆಯಲ್ಲಿ ಉಪಚಾರವಾಗುವದು. ಕ್ಷಿತಿಪತಿಯೂ ಮಲ್ಲಿನಾಥಪದಪಾಂಸುವಿನಿಂದ ನಿಜ ಲಲಾಟ ಪಟ್ಟದಲ್ಲಿ ಅಪವರ್ಗವಿಳಾಸಿನೀ ವಶ್ಯತಿಳಕವನ್ನು ತಳೆದು ಅವನನ್ನು ಸಿಂಹಾಸನದಲ್ಲಿ ಕುಳ್ಳಿರಿಸುವನು. ಪಂಚಾಶ್ಚರ್ಯಗಳಾಗುವವು. (ನಾಗಚಂದ್ರ ಕವಿಗೆ ಕಥೆ ಹೇಳಹೇಳುತ್ತ ಕ್ಷಣ ಹೊತ್ತು ತಾನೆ ಆ ಅರಸನಾದಂತೆಯೂ ಮಲ್ಲಿಜಿನನು ತನಗೇ ಹರಿಸಿದಂತೆಯೂ ಎನಿಸುವದು.) ನಂದಿಷೇಣನು ಧನ್ಯನಾಗುವನು. ಶ್ವೇತವನದಲ್ಲಿ ಜಿನನ ತಪಃಪ್ರಭಾವವು ಬೆಳಗುವದು. ವನವೆಲ್ಲ ನಿರ್ವೈರವಾಗುವದು. ಶಿಶಿರವಾತವು ತನ್ನ ಸ್ವೈರ ಸಂಚಾರದಲ್ಲಿ ಕಾಮುಕರನರಸುತ್ತ ಅಲ್ಲಿಗೂ ಬರುವದು. ಆ ಬನವೊ ಮನೋರಾಜನ ಎರೆವಟ್ಟು ಅದನ್ನು ಅಂಜದೆ ವಿಜಿಗೀಷು ವೃತ್ತಿಯಿಂದ ಏಕಾಂಗದಲ್ಲಿ ಇರುವ ಈ ವೀರನನ್ನು ಕಂಡು ಕಾಮನಿಗೆ ಆ ಸುದ್ದಿಯನ್ನು ತಿಳಿಸಲು ಮಾರುತನು ಬರಲು

ಅಲರಂಬಂ ತಿರುಪುತ್ತಂ, ಒಯ್ಯನಲರ್ವಿಲ್ಲಂ ನೋಡಿ ಪೇರ್ಚುತ್ತುಂ, ಉ।
ಜ್ವಲದಂಭೋರುಹಪೀಠದೊಳ್ ನೆಲಸಿ, ತನ್ನಂ ಸೋಂಕಿ ಕುಳ್ಳಿರ್ದಪೆ॥
ರ್ಮೊಲೆಯೊತ್ತಿಂ ರತಿಮೆಯ್ಗೆ ಮಾಡೆ ಪುಳಕಪ್ರೋದ್ಭೇದಮಂ ಪಾಡುತಿ–।
ರ್ದಳಿನೀಗಿತರವಕ್ಕೆ ಮೆಚ್ಚಿ ತಲೆದೂಗುತ್ತಿರ್ದನಂಗೋದ್ಭವಂ॥

ಎಡಕ್ಕೆ ಮಧು, ಬಲಕ್ಕೆ ಚಂದ್ರ, ಸುತ್ತಲೂ ಪರಿಜನರು, ಇಂಥ ಸಂಭ್ರಮದ ಸಭೆಯಲ್ಲಿದ್ದವನಿಗೆ 'ನಿನ್ನೀ ಭುಜಾಗರ್ವದಗುರ್ವಂ ಪುಲ್ಲಿಂಲಘುವೆನೆ ಬಗೆವನು'–ಒಬ್ಬನು 'ಗೌರಿನಾಥನಿಗಿಂತ ತಾನು ಹೆಚ್ಚಿನವನೆಂಬಂತೆ

ಸಮೀಪದ ಬಸದಲ್ಲಿದ್ದಾನೆ.' ಎಂದರಿಕೆ ಮಾಡಿಕೊಳ್ಳುವನು. ಕಾಮನಿಗೆ ಕ್ರೋಧವುಂಟಾಯಿತು. 'ಉಮಾಧವ ಮಾಧವ ವಚೋಧವರಿಗಿಂತ ಇವನು ಒಲ್ಲಿದನೇ? ಮುನಿಪನಂ ಸೋಲಿಸಲು ಚೂತಾಂಕುರಂ ಸಾಲದೇ? ಕೋಗಿಲೆ ಜಡಿದು, ಗಿಳಿ ನುಡಿದು, ಹಂಸೆ ನಡೆದು ಇವನನ್ನು ಸೋಲಿಸಿ ಬಿಡಬಹುದು' ಮಧುವೆಂದನು. ಸ್ಮರನು ದಂಡೆತ್ತಿ ಬಂದನು. ಆ ಮುನಿ ಮುಖ್ಯನ ಚಿತ್ರಕ್ಕೆ ಲಕ್ಷ್ಯವಿಟ್ಟು ಹೂಗಣೆ ಹೂಡಿದನು. ಆದರೆ ಅವನಿಗೆ ಹೆದರಿಕೆ ಹುಟ್ಟಿ ಮೈ ಕೈ ನಡುಗಿ ಬಿಲ್ಲು ಬಾಣ ಬಿದ್ದುಬಿಟ್ಟವು. ಹೊಟ್ಟೆಯಲ್ಲಿ ಹುಟ್ಟಿದ ಸಿಟ್ಟಿಗೆ ಹಾದಿಯೆಲ್ಲಿ?

ಬಿದಿರೊಳ್ಪುಟ್ಟಿದ ಕಿಚ್ಚಿನಂತೆ ಸುಡೆ ತನ್ನಂ ತನ್ನ ಕೋಪಾನಳಂ।
ಮದನಂ ಮುನ್ನಮೆ ಬೆಂದು ತನ್ಮುನಿಯ ಬೋಧಾಳೋಕ
ಸೌಧಾಂಬುವಾ॥

ಹದಯಾವರ್ಷಣದಿಂ ಕ್ಷಣಂ ತಡೆದನೇ ತಣ್ಣೀರ್ಗಳಿಂ ಬೇವನು।
ಣ್ಣಾದ ಕಲ್ಲಂತಿರೆ ಬೆಂದನುಣ್ಮೆ ಸುರಪುಷ್ಪಾಸಾರ ಭೇರೀರವಂ॥

ತನ್ನ ಸಿಟ್ಟಿನಲ್ಲಿ ತಾನು ಸುಟ್ಟು ಹೋದನು ಕಾಮನು. ರತಿಯು ಮತಿಮರೆದಳು, ಮೈ ಮರೆದಳು, ಕುದಿಗೊಂಡಳು, ಅತ್ತಳು, ಬೆವತಳು. 'ಹುಲಿಹುಲ್ಲೆಗಳೂ ಇವನ ಹತ್ತಿರ ವೈರವನ್ನು ಮರೆತಿರಲಾಗಿ ಈ ಶಾಂತಾತ್ಮನೆತ್ತ! ಎನ್ನ ಕಾದಲನಂ ಮನ್ಮಥನಂ ತೃತೀಯ ನಯನಕ್ಕಾಪೋಷನಂ ಮಾಳ್ಪುದೆತ್ತ!' ಎಂದು ಹಲುಬಿದಳು.

ನೀರಸಮಪ್ಪ ತಾಪಸನ ತೋಟಿಯೊಳೋಪನದೃಶ್ಯಮಾಗೆ ಸಂ।
ಸಾರಮಸಾರಮಾದುದ ಬಳಾಜನಮೋ ಮುಖಚಂದ್ರಚಂದ್ರಿಕಾ॥
ಸಾರದರಸ್ಮಿತಾಮೃತ ಘನಸ್ತನ ಕಾಂಚನಕುಂಭಪೂರ್ಣಶ್ಚಂ।
ಗಾರರಸಂಗಳಿಂ ಮಗುಳೆ ಪುಟ್ಟಿಸಲಾಗದೆ ಕಾಮದೇವನಂ॥

ಎಂದು ಅಬಲೆಯರಿಗೂ ಮೊರೆಯಿಟ್ಟಳು. ಕೊನೆಗೆ 'ನೀಂಕಳೆಯೆ

ಮನ್ಮಥ ಬೆನ್ನನೆ ಬಾರದಿರ್ಪನೇ ?' ಎಂದು ಪೂವಿನ ಕಂಪು ಪಿಂಗು ವಂತಿರದೆ ಅಸು ಪೋದುದು. ರತಿಯು ಪತಿವ್ರತೆಯು 'ಓಪರೊಡ ಸಾವುದು ಸೈಪಿನೊಳಲ್ಲಿ ದಕ್ಕುಮೇ ?' (೧೪ನೆಯ ಆಶ್ವಾಸದ ೧೭ ರಿಂದ ೫೩ ರೊಳಗೆ ಒಂದು ಸಣ್ಣ ಕಪನವನ್ನೇ ನಾಗಚಂದ್ರನು ತನ್ನ ಮನೋಹರ ಶೈಲಿಯಲ್ಲಿ ಬರೆದಿರುವನು.) ಹೀಗೆ ನಿಷ್ಕಾಮನಾಗಿ ಎಂಟು ಕರ್ಮಗಳನ್ನು ಕೆಡಿಸಲು ಮಲ್ಲಿನಾಥನುದ್ಯತನಾದನು. ಶುಭ ಧ್ಯಾನಪರನಾದನು. 'ಜೀವಕ್ಕೆ ಶರಣ್ಯವೊಂದೆ ನಿರ್ಮಳಧರ್ಮಂ' ಎಂದರಿದನು. ಮೂರು ದರ್ಶನ ಮೋಹಗಳನ್ನೂ, ನಾಲ್ಕು ದರ್ಶನ ಘಾತಿಗಳನ್ನೂ ಕಿಡಿಸಿದನು; ಹದಿನಾರು ಪ್ರಕೃತಿಗಳನ್ನು ಪಡಲ್ವಡಿಸಿ ದನು; ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆಗಳನ್ನು ಬೆಂಕೊಂಡನು: ಕ್ರೋಧ, ಮಾನ, ಮಾಯಾ, ಲೋಭಗಳನ್ನು ನಿರ್ಮೂಳಿಸಿದನು. ಕ್ರಮವಾಗಿ ಮೋಹನೀಯಕರ್ಮವು ಕ್ಷಯ ವಾಗಲು, ಎರಡು ವಿಧದ ಶುಕ್ಲಧ್ಯಾನಕ್ಕನುವಾಗಿ ಕೊನೆಗೆ ಅಯ್ದು ಜ್ಞಾನಾವರಣ, ನಾಲ್ಕುದರ್ಶನಾವರಣ, ಅಯ್ದು ಅಂತರಾಯಗಳ ಪರಿಹಾರವೂ ಆಯಿತು. 'ಉಪಮಾತೀತನಿಜಪ್ರಕಾಶಗುಣದಿಂ ಪ್ರತ್ಯಕ್ಷಮಪ್ಪಂತು ಪದಾರ್ಥಂಗಳನೆಲ್ಲಮಂ' ಮಾಡಿದನು.
ಸ್ವಯಂಪ್ರಕಾಶವಾದ ದಿವ್ಯಜ್ಞಾನವು ಮೈದೋರಿತು.

ಕರಣಮನಾಸೆವಟ್ಟಿರದೆ, ದೂರಮಿದೆನ್ನದೆ, ಸಾರೆಯೆನ್ನದೆ, ಅಂ।
ತರಿತಮಿದೆನ್ನದೆ ಒರ್ಮೊದಲೆ ವಸ್ತುಗಳಂ ಗುಣಪರ್ಯಯಂಗಳಂ॥
ಪರಿವಿಡಿಯಿಲ್ಲದೇಳಿತೆರನಾದುವಂ ಅಪ್ಪುವಂ ಆಗಲಿರ್ದುವಂ ।
ಕರದೊಳಗಿರ್ದ ನೆಲ್ಲಿಗೆಣೆಯಾಗಿರೆ ಕಾಣ್ಬರಿವಾಯ್ತುಜಾತನೊಳ್ ॥

ಇದೇ ಕೈವಲ್ಯಜ್ಞಾನೈಶ್ವರ್ಯ! ಇದಕ್ಕಾಗಿ ಭೂಭುವನನೆಲ್ಲ ಕಾದಿದೆ. ಈ ಉತ್ಸವಕ್ಕೆ ಆಗ 'ಧರೆ ಪೊಸಸುಗ್ಗಿಯ ಪುಣ್ಣಿಮೆಯಿ ರುಳಂತಿರೆ ತೀವಿತೊಳಗಿ' ಬೆಳಗಿತು. ಇಂದ್ರನ ಆಸನಕಂಪವಾಯಿತು.

ಪುಷ್ಪವೃಷ್ಟಿಯಾಯಿತು. ಶಂಖನಿನಾದವಾಯಿತು. ಭೇರಿರವವಾಯಿತು. ಕಂಠೀರವವಾಯಿತು. ಆಗ ಸೌಧರ್ಮೇಂದ್ರನಿಗೆ ಜಿನಪತಿಯ ಕೇವಲ ಜ್ಞಾನೋತ್ಪತ್ತಿಯ ಅರಿವಾಯಿತು. ಜಿನಪತಿಯ

'ತನುಘಾತಿಕ್ಷಯದಿಂ ಸಭಕ್ಕೆನೆಗೆದಂಗೋಪಾಂಗಮುಂ ಪೆತ್ತ
ಮಿಂ। ಚಿನವೊಲಿರ್ಪುದು

ಸಭಾಗೃಹನಿರ್ಮಾಣವಾಯಿತು. ಅದನ್ನು ಬಣ್ಣಿಸುವದಸಾಧ್ಯ.

ಜಿನಸಭೆಯೆಂದು ಒಂದು ಪುಗಲುಂ ಪೊಸವೂಗಳನಾಯಲುಂ
ಭಯಂ ॥

ಜನಿಯಿಸೆ **ಗಾಳಿಯಿಂ ಪೊರಗೆಸೂಸಿದುವಂ ಕಳಿವೂವ
ನಾಯ್ದು ವೋ ॥**

**ಹನಸರಮುಂ ಸ್ಮರಂ ಸಮೆದು ಲೋಕಮುನಂಜಿಪನೆಂ**
ದೊಡಾಲತಾ।

ವನದವಿಳಾಸಮುಂ ವನಜಸಂಭವನುಂ ಪೊಗಳಲ್ ಸಮರ್ಥನೇ ॥
ಚಿತ್ರಮೆ ಸೂತ್ರಧಾರನೆನೆ ಸೂತ್ರಿಸಿದಂ ಸುರರಾಜನಾಜ್ಞೆಯಿಂ।
ವಿತ್ತಪನಿನ್ನವಿಲ್ಲೆನಿಪ ರನ್ನದಿನೆಂಬ ಜಗದ್ವಿಚಿತ್ರಸಂ॥
ಪತ್ತಿಗೆ ಸೋಂತ ಗಂಧಕುಟಿಯುಂ ಪೊಗಳಲ್ಬಗೆದರ್ಪದರ್ಪಮೇಂ।
ಚಿತ್ತದಗೊತ್ತುಕಣ್ಣಪದಪೇನೊಳಕೊಳ್ಳದೆ ಮೌನಮುದ್ರೆಯುಂ॥

ಮಲ್ಲಿಜಿನನ ಕಾಯಿಕದ ಅತಿಶಯವಂತೂ ಅಪೂರ್ವವಾಗಿತ್ತು. 'ತನ್ನ ಪುರ್ಬಿನೊಳಂ ಕರ್ಪನಬಿಲ್ಲ ಕೆಚ್ಚನುಡಿದಂ ಮೆಯ್ವೆರ್ಚಿದಂಗಾಲ ಕೆಂಪಿನೊಳಂ ರಾಗಮುನಿಕ್ಕಿ ಮೆಟ್ಟಿದಂ' 'ಕುಡುಮಿಂಚಿನ ತಿರುಳಂ ಮುಸೆದಂತೆ ಮೆಯ್ಯಬಣ್ಣಂ ಬಂಬಲ್ವೆರೆ' ಮುಸಗಿತು. ಶಬ್ದಾದ್ವೈತವೆಂಬಂತೆ ಸಾರ್ಧದ್ವಾದಶಕೋಟಿ ದೇವದುಂದುಭಿರವ ಭೋರ್ಗರೆದುವು' ಸುರಪತಿಯು ಸ್ತುತಿಸಿದನು, ಪೂಜಿಸಿದನು. ಎಲ್ಲ ದೇವ

ದೇವತೆಗಳು ಪೂಜಿಸಿದರು. ದೇವನಿಗೆ ದಿವ್ಯಧ್ವನಿಯು ಸಮನಿಸಲು ಧರ್ಮಾಮೃತವನ್ನು ಸುರಿಸಿದುದಾಯ್ತು. ಧರ್ಮಚಕ್ರಾಧಿನಾಥನು ಧರ್ಮಾನುಗ್ರಹಾರ್ಥ ಹೊರಟನು. ಕುಮತವನ್ನು ಅಳಿಯುತ್ತ, ರತ್ನತ್ರಯವನ್ನಲಂಕರಿಸುತ್ತ ಸಂಮ್ಮೇದಶಿಖರಕ್ಕೆ ಬಂದನು. ಅಲ್ಲಿ ಪರಮಶುಕ್ಲಧ್ಯಾನದಲ್ಲಿ ನೆಲಸಿ ಕೊನೆಗೆ

**'ಜಿನಂ ಮುಕ್ತಿರಮಾಕಚಗ್ರಹಸ್ತನಪರಿರಂಭಾರಂಭಕೇಳಿ ಗುತ್ಸುಕನಾದಂ'**

(ಜಿನನು ಕಾಮನನ್ನು ಗೆದ್ದರೂ ನಾಗಚಂದ್ರನ ಕವಿವಾಣಿಗೆ ಆ ಶನಿಯು ಕೊನೆಗೂ ಬಿಡಲಿಲ್ಲ ಪಾಪ!)

ನಾವೂ ಸಿಳಿಂಪನಾಯಕನಿಕಾಯದೊಡನೆ ಕರಕಿಸಲಯವನ್ನು ನೊಸಲ್ಗೆ ತಂದು ಹಾಡುವಾ.

ಮನೋಭವನಜನ್ಮಭೂಮಿ ಮನವೆಂದು ನಿರ್ಬಂಧದಿಂ।
ಮನಕ್ಕೆಲಯಮಂ ವಿನಿರ್ಮಿಸಿ ಮನೋಭವಂಗಾಶ್ರಯಂ॥
ವಿನಷ್ಟಮೆನಿಸಿತ್ತೆ ಮತ್ತೆ ಪೆರರಾಪ್ತರೇನೀಯರೇ।
ಮನೋಭವನುಮಂ ಮಹಾಪುರುಷಮಲ್ಲಿಭಟ್ಟಾರಕಾ॥

ಮನಕ್ಕೆಲಯವನ್ನು ವಿನಿರ್ಮಿಸಿ ಮಹಾತ್ಮರಾಗುವವರೆಗೆ ಮಾನವರ ಗತಿಯೇ ಹೀಗೆ?

ಇದೇಂ ಜಡರೊಮ್ಮೈತ್ರಿಯುಂ ಕರುಣಮುಂ ಬಿಸುಟನ್ಯರಂ।
ವಿದಾರಿಪುದೆ ವೀರಂ ಅಂಧರ್ ಅವಿಚಾರಚಾರರ್ ಕೆಲರ್॥
ಚಿದಾತ್ಮಭವದುಃಖಕಾರಣಮುಂ ಇಂದ್ರಿಯಾರಾತಿಯುಂ।
ವಿದಾರಿಸುವ ವೀರಮುಂ ಮರೆದು ಮಲ್ಲಿಭಟ್ಟಾರಕಾ॥

ಇದೇನೋ ವೀರಮಾರ್ಗ ನಿಜ!

ಅಂತೂ ಕೊನೆಗೆ ಮಲ್ಲಿಜಿನನು ಮುಕ್ತಿವಧುವಿನ ಕೈಹಿಡಿವನು.

## ಕೊನೆಯ ಒಂದೆರಡು ಮಾತು

ಕಾಮುದ ಕೈಗೆ ನಿಲುಕದ ಆನಂದದ ಅಧಿನಾಯಕನಾಗುವದು ಹೇಗೆ ಎಂಬ ಚಿರಂತನ ಸಮಸ್ಯೆಗೆ ನಾಗಚಂದ್ರನು ಕಾವ್ಯಮುಖವಾಗಿ ಉತ್ತರವಿತ್ತಿದ್ದಾನೆ. ಅನುಭವಬಲದಿಂದ ಮುಕ್ಕಾಲುಪಾಲು ಕಾವ್ಯ ಬರೆದು ಸಮಯಬಲದಿಂದ ಒಕ್ಕಾಲುಪಾಲು ಹೊಡೆದುಹಾಕಿದ್ದಾನೆ. ಅವನ ಸೂಕ್ತಿಗಳು ಸುಂದರವಾಗಿವೆ. ೧೩ನೆಯ ಆಶ್ವಾಸದ ೧೬೪ ನೆಯ ಪದ್ಯದ ಅನಂತರ ತಂದೆತಾಯಿಗಳನ್ನು ಸುಮೋದಿಸಿದ ಭಾಗವು ಬೇಕಾಗಿದೆಯೇನೋ ಎನುವಂತಿದೆ. ೧–೫೪ ವರೆಗೆ ಪೀಠಿಕೆ ೩–೧೦೫ ರಲ್ಲಿ ಲಕ್ಷ್ಮೀಮಹಾದೇವಿಯ ನಿರ್ವೇಗ, ೪–೧೪೬ರಲ್ಲಿ ಯುವರಾಜ ಪಟ್ಟ, ೬–೫೫ರಲ್ಲಿ ಪಂಚೇಂದ್ರಿಯಾಸಕ್ತರ ದುರ್ದೆಶೆಯ ವಿಚಾರದಿಂದ ಮುಂದಿನ ಸೂಚನೆ; ೭–೧೯ರಲ್ಲಿ ಶರದಾಗಮವು ಜಿನಾಗಮಯೋಗಿ ಯನ್ನು ನೆನೆಯಿಸಿತ್ತು ಎನ್ನುವದರ ಔಚಿತ್ಯ; ೯–೫೪ರಲ್ಲಿ ವೈಶ್ರವಣನ ವೈರಾಗ್ಯ, ೧೦–೧೦೦ ಕಾಂತಾರದಲ್ಲಿ ನಿರ್ವೇಗ; ೧೧–೭೦ ಅಹ ಮಿಂದ್ರವೈಭವ–ಎರಡನೆಯ ಜನ್ಮ; ೧೧–೯೧ ಮಲ್ಲಿಜಿನನ ನಿರ್ವೇಗ; ೧೪–೧೭ರಿಂದ ೫೭ ಕಾಮನಿರ್ವಾಣ; ೧೬–೨೯೦ ಜಿನನಿರ್ವಾಣ. ಹೀಗೆ ವಿಷಯದ ಪ್ರಮಾಣವನ್ನು ನೋಡಿದರೆ ನಾಗಚಂದ್ರನ ರಚನಾ ಕೌಶಲ್ಯದ ಬಗ್ಗೆ ಆಶ್ಚರ್ಯವೆನಿಸುವದು. ಪ್ರಕೃತಿಸೌಂದರ್ಯವರ್ಣ ನೆಯ ನಾಲ್ಕು ಆಶ್ವಾಸಗಳನ್ನೂ ವಸ್ತುಪೋಷಣೆಗೂ ಅನುಕೂಲ ಮಾಡಿಕೊಂಡಿದ್ದಾನೆ. ದಿವ್ಯಪ್ರಕೃತಿಯು ಮೈದೋರುವ ಮೊದಲು ಭೂತಪ್ರಕೃತಿಯು ಮೆರೆದಾಡಲೆಂದು—ಅದಕ್ಕೆ ವಿಶಾಲಾಂಗಣವು ಈಯಲಾಗಿದೆಯೇನೊ! ಇದು ಎರಡುಜನ್ಮದ ಕಥೆಯೇ ಅಲ್ಲವೇನೋ ಎಂಬಂತೆ ಕಥಾನಾಯಕನ ಸ್ವಭಾವಕ್ರಮ ಪರಿಪೋಷಣೆಯಾಗಿದೆ. ಜನ್ಮಗಹನವಿಲ್ಲ, ಅಂಗಗಳ ಅಕ್ರಮವಿಲ್ಲ, ನಾವೂ ಕವಿಯೊಡನೆ ಮಂಗಳವನ್ನು ಹಾಡಲು ಯಾವ ಅಭ್ಯಂತರವೂ ತೋರುವದಿಲ್ಲ.

ಸುಕೃತಿಪ್ರೀತಿಲತಾಸಮುತ್ಕಳಿಕೆ, ವಿದ್ವನ್ಮಂಡಳೀರತ್ನಕಂ।
ಠಿಕೆ, ಧರ್ಮಾಮೃತಮೇಘಮಾಳಿಕೆ, ವಚಶ್ರೀನರ್ತಕೀ ನೃತ್ಯವೇ।
ದಿಕೆ, ಸಾಹಿತ್ಯಸರೋಜಕರ್ಣಿಕೆ, ಯಶಶ್ರೀಕೇಕರಾಳೋಕಚಂ।
ದ್ರಿಕೆ, ಸಿಲ್ಕೀಕೃತಿ ಕಲ್ಪಕೋಟಿವರೆಗಂ ಭದ್ರಂ ಶುಭಂ ಮಂಗಳಂ॥

ಜಿನನೆ ಸುಂದರ; ಅವನೆ ಪರಮಪ್ರೀತಿಗೆ ಯೋಗ್ಯ; ಅವನೆ ಆನಂದದ ನಿಧಿ, ನಿಜದನೆಲೆ, ರಸದಝರಿ. ಭಕ್ತಿಯನ್ನು ಬಿಟ್ಟು ಉಳಿದುದೆಲ್ಲವೂ ಹೊಟ್ಟೆಬಟ್ಟೆಯ ಹೋರಾಟವೆಂದು ಕನಕನು ಹೇಳಿದಂತೆ ನಾಗಚಂದ್ರನು ಹೇಳುವದೇನಂದರೆ:— ಜಿನನನ್ನು ಬಿಟ್ಟು ಉಳಿದುದೆಲ್ಲವೂ ಕಾಮರತಿಯರ ಶೃಂಗಾರಸೃಷ್ಟಿ, ಶಾಂತದಲ್ಲಿದ್ದವನಿಗೆಯೆ ನಿಜವಾದ ಸೌಂದರ್ಯ ಆನಂದ ಪ್ರೀತಿಗಳ ಲಾಭವಾಗುವದು—ಇದೆ ನಾಗಚಂದ್ರನ ಸೌಂದರ್ಯ-ಸೂತ್ರ; ಮಲ್ಲಿನಾಥಪುರಾಣ ಮಹಾಕಾವ್ಯವು ಸೌಂದರ್ಯಸೂಕ್ತ. ಸಮ್ಯಗ್ಜ್ಞಾನದಿಂದುಂಟಾದ ಸಮತ್ವದಲ್ಲಿ ಬೆಳೆಯುವ ಶಾಂತ—ತಮ ರಜಸ್ಸುಗಳಾಚೆಗಿನ ಆ ಬೆಳಕು, ಕವಿದರ್ಶನಕ್ಕೂ ಕವಿವರ್ಣನಕ್ಕೂ ಯೋಗ್ಯವಾದ ಲೋಕ. ಇಲ್ಲಿಯೇ ಕವಿಯು ಋಷಿಯಾಗುವನು. ಹಗಲುಹಣ್ಣಿಗೆ ಹನುಮನು ಬಾಯಿ ತೆರೆದಂತೆ ನಾಗಚಂದ್ರನೂ ಋಷಿತ್ವದ ಸಾಧನೆ ಮಾಡಿದ್ದಾನೆ; ಅದಕ್ಕೆ ಬಾಯಿತೆರೆದಿದ್ದಾನೆ ಮಲ್ಲಿನಾಥನನ್ನು ಹೇಳುವಲ್ಲಿ.

---

# ಪಂಪರಾಮಾಯಣವೂ ಜೈನಧರ್ಮವೂ

(ಪಂಡಿತ ಮ. ಪ್ರ. ಪೂಜಾರ)

ಪಂಪರಾಮಾಯಣದ ಸ್ವಾರಸ್ಯವನ್ನು ಅದು ಒಂದು ಸರಸ ಮಹಾ ಕಾವ್ಯವು ಎಂಬ ದೃಷ್ಟಿಯಿಂದ ಹಲವುಜನ ವಿದ್ವಾಂಸರು ಸಹೃದಯರಿಗೆ ಆನಂದವಾಗುವಂತೆ ತೋರಿಸಿರಬಹುದು. ಅದು ಹಾಗೆ ಸ್ವಾರಸ್ಯವುಳ್ಳುದು ನಿಜವೆ. ಇನ್ನು ಪಂಪರಾಮಾಯಣವು ಕಾವ್ಯವಾಗಿರುವಂತೆ ಪುರಾಣವೂ ಆಗಿರುವುದರಿಂದ ಧರ್ಮದೃಷ್ಟಿಯಿಂದ ಮಾಡಿದ ಅದರ ವಿಮರ್ಶೆಯು ಅದರ ಇನ್ನೂ ಹೆಚ್ಚಾದ ಸ್ವಾರಸ್ಯವನ್ನು ಪ್ರಕಟಿಸುವುದಕ್ಕೆ ಸಹಾಯಕವಾಗುವುದು. ಜೈನಧರ್ಮವಿಶಾರದರಾದವರು ಈ ವಿಮರ್ಶೆಯನ್ನು ಬರೆದಿದ್ದರೆ ಒಳ್ಳೆಯದಾಗುತ್ತಿದ್ದಿತೆಂಬ ವಿಷಯದಲ್ಲಿ ಸಂಶಯವಿಲ್ಲ. ಜೈನಧರ್ಮ ವಿಚಾರದಲ್ಲಿ ಅಲ್ಪಜ್ಞನಾದ ನಾನು ಈ ಕೆಲಸದಲ್ಲಿ ತೊಡಗಿದುದು ಸಾಹಸವೇ ಸರಿ. ಈ ಲೇಖದಲ್ಲಿ ವೈದಿಕ, ಜೈನಧರ್ಮಗಳ ತರತಮಭಾವವನ್ನಾಗಲಿ, ಧರ್ಮತತ್ತ್ವಗಳ ಯುಕ್ತಾಯುಕ್ತತೆಯನ್ನಾಗಲಿ, ವೈದಿಕ ಜೈನ ರಾಮಾಯಣಗಳ ಪ್ರಾಚೀನತೆ–ಅರ್ವಾಚೀನತೆಗಳನ್ನಾಗಲಿ ಸೂಚಿಸುವ ಉದ್ದೇಶ್ಯವನ್ನು ಇಟ್ಟುಕೊಳ್ಳದೆ ಪಂಪರಾಮಾಯಣದಲ್ಲಿ ಬಂದ ಕೆಲವು ಧರ್ಮವಿಚಾರಗಳನ್ನೂ ವ್ಯಕ್ತಿಚಿತ್ರಗಳನ್ನೂ ಪಂಪರಾಮಾಯಣದ ಧಾರ್ಮಿಕ ಪ್ರಭಾವವನ್ನೂ ಸಂಕ್ಷೇಪವಾಗಿ ತಿಳಿದಮಟ್ಟಿಗೆ ತೋರಿಸಬೇಕೆಂದಿರುವೆವು.

**ಪಂಪರಾಮಾಯಣದಲ್ಲಿ ಪ್ರತಿಪಾದ್ಯ ವಿಷಯ:—**
ಪ್ರಾಕೃತಭಾಷೆಯಲ್ಲಿ ಅನೇಕಾನೇಕ–ಉಪಾಖ್ಯಾನಗಳಿಂದೊಡಗೂಡಿ ವಿಸ್ತಾರವಾಗಿರುವ ರಾಮಚರಿತವನ್ನು ವರ್ಣಿಸುವ ಜೈನ ಮಹಾ ಗ್ರಂಥವು **'ಪಉಮಚರಿಯಂ'** (ಪದ್ಮಚರಿತಂ) ಎಂಬುದು. ಇದು ಸು. ಕ್ರಿ. ೧ನೆಯ ಶತಾಬ್ದಿಯಲ್ಲಿ **ವಿಮಲಾಚಾರ್ಯ**ನಿಂದ ರಚಿತ ವಾದುದು. ಪದ್ಮನೆಂದರೆ ರಾಮನು. ಸಂಸ್ಕೃತಭಾಷೆಯಲ್ಲಿ ಸು. ಕ್ರಿ. ೭ನೆಯ ಶತಾಬ್ದಿಯಲ್ಲಿ **ರವಿಷೇಣಾಚಾರ್ಯ**ನಿಂದ ರಚಿತವಾದ **ಪದ್ಮಪುರಾಣ**ವೆಂಬುದೂ ಜೈನರಾಮಾಯಣವು. ಸಂಸ್ಕೃತದಲ್ಲಿ ವ್ಯಾಸಮುನಿಯಿಂದ ರಚಿತವಾದ ಹಿಂದುಗಳ ಪದ್ಮಪುರಾಣವೊಂದಿದೆ. ಅದಕ್ಕೂ ಇವಕ್ಕೂ ಯಾವ ಸಂಬಂಧವೂ ಇಲ್ಲ. ಪ್ರಾಕೃತ ಸಂಸ್ಕೃತ ಭಾಷೆಗಳ ಈ ಜೈನರಾಮಾಯಣಗಳೆರಡೂ ವಾಲ್ಮೀಕಿರಾಮಾಯಣ ಕ್ಕಿಂತ ಈಚೆಯವು. ಹಿಂದುಗಳಲ್ಲಿ ಪರಂಪರೆಯಾಗಿ ಪ್ರಚಲಿತವಾ ಗಿದ್ದ ರಾಮಚರಿತೆಯನ್ನು ವಾಲ್ಮೀಕಿಯು ರಾಮಾಯಣವನ್ನಾಗಿ ರಚಿಸಿದಂತೆ ಜೈನ ಜನತೆಯಲ್ಲಿ ಪ್ರಚಲಿತವಾಗಿದ್ದ ರಾಮಚರಿತೆಯಿಂದ 'ಪಉಮಚರಿಯ'ವೂ ಪದ್ಮಪುರಾಣವೂ ಉಂಟಾದುವು. ಈ ರಾಮಾಯಣಗಳು ಭರತಖಂಡದ ಎಲ್ಲ ಭಾಗಗಳಲ್ಲಿ ಬಳಕೆಯಲ್ಲಿವೆ. **ನಾಗಚಂದ್ರ** (ಅಭಿನವಪಂಪ) ಕವಿ, ಪದ್ಮಪುರಾಣದ ರಾಮಚರಿತ ಕಥಾಭಾಗವನ್ನು ಸಂಗ್ರಹಿಸಿ ಪಂಪರಾಮಾಯಣ ಎಂಬ ರಾಮ ಚಂದ್ರಚರಿತ ಪುರಾಣವನ್ನು ಕನ್ನಡಭಾಷೆಯಲ್ಲಿ ರಚಿಸಲು ಕರ್ನಾಟಕ ದಲ್ಲಿ ಅದೇ ಹೆಚ್ಚಾಗಿ ಬಳಕೆಯಲ್ಲಿ ಬಂದಿತು.ತನ್ನ ಗ್ರಂಥಕ್ಕೆ ಪ್ರಾಚೀನ ಮಹಾಗ್ರಂಥಗಳು (ಪಉಮಚರಿಯ, ಪದ್ಮಪುರಾಣ)ಗಳು ಮೂಲ ವಾಗಿರುವುವೆಂಬುದನ್ನು ಅಭಿನವಪಂಪನು ತನ್ನ ರಾಮಾಯಣದ ಕೊನೆಯಲ್ಲಿ "ಪಿರಿದೆನಿಸಿರ್ದ ರಾಮಕಥೆಯಂ ಕಿಱಿದಾಗಿರೆ ದೇಸಿ ಮಾರ್ಗಮೆಂಬೆರಡಱಿತೊಳಂ........ಕೃತಿವೇೞಿತ್ತೊಡೆ ಸತ್ಕವಿ ನಾಗ

ಚಂದ್ರನಂ। ತಿರೆ.....'' (ಆ. ೧೬. ಪ. ೯೭) ಎಂದು ಸೂಚಿಸಿರುವನು. ಅನಾದಿಕಾಲದಿಂದ ಜಿನರೂ, ಗಣಧರರೂ ಪರಂಪರೆಯಾಗಿ ಹೇಳುತ್ತ ಬಂದುದೂ (೧ ೩೮.), ವರ್ತಮಾನಕಾಲದಲ್ಲಿ ["ವಿಪುಲಾಚಲದೊಳ್ ವೀರ ಜಿ। ನ ಪಾರ್ಶ್ವದೊಳ್ ಗೌತಮಂ ಗಣಾಗ್ರಣಿ ಮಗಧಾ॥ ಧಿಪನಜೀಯೆ ನೆಜೀಯೆ ಪೇಳ್ದಿ। ನ ಪೂರ್ವಮೆನೆ ರಾಮಕಥೆಯ ನಭಿವರ್ಣಿಸುವೆಂ॥ (೧ ೪೦)] ಗೌತಮ ಗಣಧರರು§ ಮಗಧರಾಜ ನಿಗೆ ಹೇಳಿದುದೂ ಆದ ಶ್ರೀರಾಮಚರಿತೆಯು ಈ ಪುರಾಣದ ಪ್ರತಿ ಪಾದ್ಯ ವಿಷಯವು.

ಪಂಪರಾಮಾಯಣವು ಕನ್ನಡದಲ್ಲಿ ಮಹಾಕಾವ್ಯವೆನಿಸಿದ್ದರೂ ಅದೊಂದು ಜೈನಪುರಾಣವು. ಜೈನಧರ್ಮ ವಿಚಾರಗಳೂ, ಜೈನ ಧರ್ಮದಲ್ಲಿ ರಾಮಾದಿಗಳ ಸ್ಥಾನವೂ ತಿಳಿಯದಿದ್ದರೆ ರಾಮನು ಲಕ್ಷ್ಮಣನ ಶವವನ್ನು ಹೊತ್ತುಕೊಂಡು ತಿರುಗಾಡಿದುದಕ್ಕೆ ಆಶ್ಚ ರ್ಯವೂ, ಅನೇಕ ಕಾರ್ಯಗಳನ್ನು ಮಾಡಿದಷ್ಟಕ್ಕೆ ಲಕ್ಷ್ಮಣನೇ ಈ ರಾಮಾಯಣಕ್ಕೆ ನಾಯಕನೆಂಬ ಭ್ರಾಂತಿಯೂ ಉಂಟಾಗುವುದು ಸಹಜವು. ಈ ಪುರಾಣದಲ್ಲಿ ನಾಯಕನಾದ ಶ್ರೀರಾಮನ ಚರಿತೆ ಯಲ್ಲದೆ ಅಂಗವಾಗಿ ವಾಸುದೇವ ಪ್ರತಿವಾಸುದೇವರಾದ ಲಕ್ಷ್ಮಣ ರಾವಣರ ಚರಿತ್ರವೂ, ಸಮಯೋಚಿತವಾಗಿ ಜಿನರು,† ಚಕ್ರಿ (ಚಕ್ರ

§ **ಗಣಧರ**— ಕೇವಲ ಜ್ಞಾನವೆಂಬ ಪರಮಜ್ಞಾನವನ್ನು ಪಡೆದ ತೀರ್ಥಂ ಕರರು ಜಗತ್ತಿಗೆ ಧರ್ಮೋಪದೇಶ ಮಾಡುವರು. ಅವರ ಮುಖದಿಂದ ಸರ್ವಭಾಷಾ ಮಯಿಯಾದ ದಿವ್ಯಭಾಷೆ ಹೊರಡುವುದು. ಅದು ದೇವತೆಗಳಿಗೆ ದೇವಭಾಷೆಯಾ ಗಿಯೂ. ಮನುಷ್ಯರಿಗೆ ಮನುಷ್ಯಭಾಷೆಯಾಗಿಯೂ, ತಿರ್ಯಂಚಗಳಿಗೆ ತಿರ್ಯಗ್ಭಾಷೆ ಯಾಗಿಯೂ ಇರುವುದು. ಈ ದಿವ್ಯಭಾಷೆಯ ಅರ್ಥವನ್ನು ಅವರ ಬಳಿಯಲ್ಲಿದ್ದ ಇತರರಿಗೆ ವಿವರಿಸಿ ಹೇಳುವವರು ಗಣಧರರು.

† **ಜಿನರು**— ಜಿನರು ಇಲ್ಲವೆ ತೀರ್ಥಂಕರರು ಭೂತ ವರ್ತಮಾನ ಭವಿ

ವರ್ತಿ) ಗಳು, ಗಣಧರರು, ಚತುರ್ಗತಿಗಳು,§ ಕುಲಂಕರರು, (ಮನು ಗಳು), ಲೋಕಸ್ವರೂಪ, ಕಾಲಸ್ವರೂಪ ಮೊದಲಾದ ವಿಷಯಗಳೂ ಬರುವುವು. 'ಜಗಮುಂ ಯುಗಮುಂ ಮನುವ್ರಾ। ದಿಗಳುಂ ಕಾಲಸ್ವರೂ ಪಮುಂ ಜಿನರಂ ಚ।' ಕ್ರಿಗಳಂ ಹಲಧರ ಕೃಷ್ಣಾ। ದಿಗಳಂ ಶ್ರೀರಾಮ ಚರಿತದೊಳ್ ವರ್ಣಿಸುವೆಂ" (೧. ೪೧) ಎಂದು ಗ್ರಂಥಾರಂಭದ ಪ್ರತಿಜ್ಞಾವಚನದಲ್ಲಿ ಕವಿ ಹೇಳಿರುವನು. ಇದಲ್ಲದೆ ಜಿನಬಸದಿಯನ್ನು ನಿಜವಿಭವೋದಯಂ ಸಫಲಮಾಯ್ತೆನೆ ಮಲ್ಲಿಜಿನೇಂದ್ರ ಗೇಹಮಂ ವಿಜಯಪುರಕ್ಕಲಂಕರಣಮಾಗಿರೆ' (-ಮಲ್ಲಿನಾಥಪುರಾಣ) ಕಟ್ಟಿಸಿ ದವನೂ, ತನ್ನ ಗ್ರಂಥರಚನೆಗೆ 'ಶ್ಲಾಘ್ಯಕಾವ್ಯಗುಣಖ್ಯಾತಿ ನಿಮಿತ್ತ ಮಲ್ಲದೆ ಶುಭಧ್ಯಾನಾರ್ಥಿಯೆಂ ಪೇೞಲಾಂ ಬಗೆದಂದೆಂ' (೧. ೩೮.) ಎಂದು ಕೇವಲ ಶುಭಚಿಂತನವೇ ಫಲವೆಂದು ಇಟ್ಟುಕೊಂಡವನೂ ಆದ ಕವಿಯು ಭಕ್ತಿಯಿಂದ ರಚಿಸಿದ ಪುರಾಣದಲ್ಲಿ ಧರ್ಮತತ್ತ್ವ ಗಳೂ, ಆಚಾರಗಳೂ ವರ್ಣಿತವಾಗಿರುವುದು ಸಹಜವು.

ಜೈನಸಾಂಪ್ರದಾಯದ ರಾಮಾಯಣ ಕಥೆ ಜೈನರಲ್ಲಿ ಪ್ರಚ ಲಿತವಾಗಿರಬಹುದು. ಬಹುಜನಸಮಾಜದಲ್ಲಿ ಅದು ಅಷ್ಟೊಂದು ಪ್ರಚಲಿತವಾಗಿಲ್ಲವೆಂದೇ ಹೇಳಬೇಕಾಗಿದೆ. ಕ. ಸಾ. ಪರಿಷತ್ತಿನವರು ಪಂಪರಾಮಾಯಣ ಕಥಾಭಾಗವನ್ನು ಸಾಮಾನ್ಯರ ಉಪಯೋಗ

---

ಷ್ಯತ್ಕಾಲಗಳಲ್ಲಿ ಬೇರೆಬೇರೆ ೨೪ ಜನರು ಆಗುವರು. ಇವರಿಗೆ ಕೇವಲ ಜ್ಞಾನವುಂ ಟಾದ ಬಳಿಕ ಲೋಕಕ್ಕೆ ಧರ್ಮೋಪದೇಶ ಮಾಡುವರು. (ಜಯತೀತಿ ಜಿನಃ— ಸಂಸಾರವನ್ನು ಗೆದ್ದವ.)

§ **ಚತುರ್ಗತಿಗಳು**—ಜೀವರು ನಾಲ್ಕು ಬಗೆಯಾಗಿರುವರು. ಸತ್ಕರ್ಮ ಫಲದಿಂದ ಸ್ವರ್ಗವನ್ನು ಪಡೆದ ದೇವರು, ಮನುಷ್ಯರು, ಅಸತ್ಕರ್ಮಗಳ ಫಲದಿಂದ ನರಕವನ್ನು ಪಡೆದ ನಾರಕರು, ಪಶು ಪಕ್ಷಿ ವೃಕ್ಷಲತೆಗಳ ರೂಪದಿಂದ ಇರುವ ತಿರ್ಯಂಚರು. ಎಂದು ಜೀವರ ಗತಿಗಳು ನಾಲ್ಕು.

ಕ್ಕಾಗಿ ತಿಳಿಗನ್ನಡದಲ್ಲಿ ಬರೆದು ತಾವು ಪ್ರಕಟಿಸಿದ ಪಂಪರಾಮಾಯಣದ ಆರಂಭದಲ್ಲಿ ಸೇರಿಸಿ ಪರಮೋಪಕಾರವನ್ನು ಮಾಡಿರುವರು.

**ಜೈನಧರ್ಮವೂ ವೀತರಾಗತೆಯೂ:—**

ಜೈನಪುರಾಣವಾದ* ಈ ಪಂಪರಾಮಾಯಣವು ಜೈನತತ್ತ್ವಜ್ಞಾನವನ್ನನುಸರಿಸಿ ಇರುವುದು ಸಹಜವು. ಇಲ್ಲಿ ಬೇಕಾಗುವ ಜೈನತತ್ತ್ವಜ್ಞಾನದ ಒಂದೆರಡು ಮಾತುಗಳನ್ನು ಈಗ ಹೇಳುವೆವು:- ಈ ವಿಶ್ವವು ತನ್ನಷ್ಟಕ್ಕೆ ತಾನೇ ಉಂಟಾದುದು. ಅದನ್ನು ನಿರ್ಮಿಸಿದವನೊಬ್ಬನು ಇರುವನೆಂದು ಬೇರೆ ಧರ್ಮಗಳು ಹೇಳುವುವು; ಆದರೆ ಜೈನಧರ್ಮವು ಜಗತ್ತಿಗೆ ಕರ್ತೃವುಂಟೆಂಬುದನ್ನು ಒಪ್ಪುವುದಿಲ್ಲ. ಜಗತ್ತು ಅನಾದಿಸಿದ್ಧವು; ಅದು ಚೇತನರೂಪವಾದ ಅಸಂಖ್ಯಜೀವಗಳಿಂದಲೂ, ಪುದ್ಗಲ (matter), ಧರ್ಮ, ಅಧರ್ಮ, ಆಕಾಶ, ಕಾಲಗಳೆಂಬ ಅಜೀವ (ಜಡ) ತತ್ತ್ವಗಳಿಂದಲೂ ತುಂಬಿಕೊಂಡಿದೆ. ಕರ್ಮವು ಅನಾದಿಯಾದುದು. ಶುಭಕರ್ಮವು ಮೋಕ್ಷಮಾರ್ಗಕ್ಕೆ ಸಹಾಯಕವಾದುದರಿಂದ ಉಪಾದೇಯವು; ಅಶುಭಕರ್ಮವು ಅಧೋಗತಿಗಿಳಿಸುವುದರಿಂದ ತ್ಯಾಜ್ಯವು. ಕರ್ಮವೆಂದರೆ ಕ್ರಿಯೆಯಲ್ಲ; ಪುದ್ಗಲ (ಪರಮಾಣು) ರೂಪವಾದುದು. ವಿಶ್ವದಲ್ಲಿ ಅನಾದಿ-ಅಸಂಖ್ಯ-ಪರಸ್ಪರಭಿನ್ನ ಜೀವರಾಶಿಯೂ, ಅದರ ಹತ್ತಿರವೇ ಕರ್ಮಪುದ್ಗಲಗಳೂ ತುಂಬಿವೆ. ಜೀವನು ತನ್ನ ಮೂಲಸ್ವರೂಪದಲ್ಲಿ ಶುದ್ಧನು, ಎಂದರೆ ಕರ್ಮಪುದ್ಗಲಗಳು ಅಂಟದ ಚಿತ್-ಆನಂದ ರೂಪನು. ಆತನಲ್ಲಿ ಚಾಂಚಲ್ಯವುಂಟಾಗಲು ಆತನಿಗೆ ಕರ್ಮಪುದ್ಗಲರೂಪಗಳಾದ ಮನೋವಾಕ್ಕಾಯ

---

* **ಜೈನಪುರಾಣಲಕ್ಷಣ**— ಆ ಪುರಾಣಕ್ಕಂ ಲೋಕಾಕಾರಕಥನಮುಂ, ದೇಶನಿವೇಶೋಪದೇಶಮುಂ, ತೀರ್ಥಮಹಿಮ ಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ, ತಪೋದಾನ ವಿಧಾನ ವರ್ಣನಮುಂ, ತತ್ಫಳಪ್ರಾಪ್ತಿ ಪ್ರಕಟನಮುಂ ಎಂದು ಇಂತು ಅವಯವಂಗಳ್ ಎಂಟು ಅಕ್ಕುಂ. —ಆದಿಪುರಾಣ

ಗಳೂ, ಬೇರೆ ಶುಭಾಶುಭ ಕರ್ಮಪುದ್ಗಲಗಳೂ ಅಂಟಿಕೊಂಡುವು. ಈ ಕರ್ಮಗಳಿಂದ ಜೀವನು ಬದ್ಧನಾಗಿ **ದೇವ, ಮನುಷ್ಯ, ನಾರಕ, ತಿರ್ಯಕ್** (ಪಶು, ಪಕ್ಷಿ, ವೃಕ್ಷಾದಿ) ಎಂಬ ನಾಲ್ಕು ಗತಿಗಳಲ್ಲಿ ಒಂದನ್ನು ಹೊಂದಿದನು. ಶುಭಕರ್ಮಗಳಿಂದ ಸುಖಪ್ರಚುರವಾದ ದೇವಜನ್ಮವು ಬಂದರೂ ಅದು ಅಸ್ಥಿರವಾದುದರಿಂದ ಜೀವನು ಸ್ವಸ್ವರೂಪವನ್ನು ಎಂದರೆ ನಿತ್ಯಾನಂದರೂಪವಾದ ಮೋಕ್ಷವನ್ನು ಅಪೇಕ್ಷಿಸುವನು. ಮನುಷ್ಯಜನ್ಮವೇ ಮೋಕ್ಷಸಾಧಕವು. ಆದುದರಿಂದ ಮನುಷ್ಯಜನ್ಮವನ್ನು ಪಡೆದಾಗ ಜೀವನು **ಗುಪ್ತಿ,**† **ಸಮಿತಿ, ಅನುಪ್ರೇಕ್ಷೆ** ಮುಂತಾದ ಸಾಧನಗಳಿಂದ ಕರ್ಮಗಳ ಆಸ್ರವ (ಆಗಮನ) ವನ್ನು ನಿರೋಧಿಸಿ ಅಂತರಂಗ ಬಹಿರಂಗ ರೂಪವಾದ ದ್ವಿವಿಧ ತಪಸ್ಸಿನಿಂದ ಅನಾದಿಯಾಗಿ ಅಂಟಿಕೊಂಡಿದ್ದ ಸಮಸ್ತಕರ್ಮಗಳನ್ನು ನಿರ್ಜರೆಗೊಳಿಸಿ (ನಾಶಗೊಳಿಸಿ) ಮೋಕ್ಷವನ್ನೈದುವನು. ಶುಭ, ಅಶುಭರೂಪವಾದ ಸಮಸ್ತಕರ್ಮಗಳ ನಿಃಶೇಷ ಕ್ಷಯವೇ ಮೋಕ್ಷವು. ಕರ್ಮಲೇಪವು ಹೋದೊಡನೆ ಜೀವನಿಗೆ ಬಂದ ಕೃತ್ರಿಮರೂಪವು ಹೋಗಿ ಆತನು ತನ್ನ ಮೂಲಸ್ವರೂಪದಲ್ಲಿ—ಚಿತ್-ಆನಂದರೂಪದಲ್ಲಿ— ಇರುವನು. ಈ ಮೋಕ್ಷದಶೆಯಲ್ಲಿ ಜೀವನು ಅನಂತದರ್ಶನ, ಅನಂತಜ್ಞಾನ, ಅನಂತಾನಂದ, ಅನಂತವೀರ್ಯಸ್ವರೂಪನಾಗಿ **ಸಿದ್ಧಶಿಲೆ***ಯ ಮೇಲೆ ವಿರಾಜಮಾನನಾಗುವನು.

† **ಗುಪ್ತಿ**—ವಿಷಯಸುಖಾಭಿಲಾಷೆಯನ್ನು ನಿರೋಧಿಸಿ, ಮನೋವಾಕ್ಕಾಯಗಳ ಸ್ವಚ್ಛಂದಪ್ರವೃತ್ತಿಯನ್ನು ಪ್ರತಿಬಂಧಿಸುವುದು. **ಸಮಿತಿ**— ಸೂಕ್ಷ್ಮಜೀವಗಳಿಗೂ ಕೂಡ ಹಿಂಸೆಯಾಗದಂತೆ ಎಚ್ಚರಿಕೆಯಿಂದ ಕ್ರಿಯೆಗಳನ್ನು ಮಾಡುವುದು. **ಅನುಪ್ರೇಕ್ಷೆ**— ಶರೀರಾದಿಗಳು ಅಸ್ಥಿರ, ಅಶುಚಿಗಳು ಕರ್ಮವನ್ನು ನಾಶಗೊಳಿಸಿದರೆ ತನ್ನ ಕಲ್ಯಾಣವು ಆದೀತು, ನನಗೆ ಜ್ಞಾನವು ಹೇಗೆ ದೊರೆತೀತು ? ಮೊದಲಾಗಿ ಪುನಃಪುನಃ ಚಿಂತಿಸುವುದು.

* **ಸಿದ್ಧಶಿಲೆ**—ಈ ಲೋಕಾಕಾಶ (ನಮಗೆ ಕಾಣಿಸುವ ಆಕಾಶ)ದ ಕೊನೆ

ಮೋಕ್ಷವು ಸರ್ವಜೀವರಿಗೂ ಬೇಕಾದುದು; ಆದರೆ ಸುಲಭವಾಗಿ ದೊರೆಯದಂತಹುದು. ಮೋಕ್ಷವೆಂದರೆ ಕರ್ಮಕ್ಷಯವಷ್ಟೇ? ಈ ಕರ್ಮಕ್ಷಯಕ್ಕೆ **ವೀತರಾಗತೆಯು** (ನಿಸ್ಸಂಗತ್ವವು) ಬೇಕು. ವಿಷಯಾಸಂಗವು ಕಡಿಮೆಯಾಗಲು ಭವಿಷ್ಯತ್ಕರ್ಮಗಳ ಲೇಪವು ಕಡಿಮೆಯಾಗುವುದು. ತಪಸ್ಸಿನಿಂದ ಪ್ರಾಕ್ತನಕರ್ಮಗಳನ್ನು ನಿರ್ಜರೆ (ನಾಶ) ಗೊಳಿಸಬಹುದು. ಈ ವೀತರಾಗಸ್ಥಿತಿಯನ್ನು ಸಂಸಾರ ನಿರ್ವೇಗವು (ಸಂಸಾರದಲ್ಲಿ ಅನಾಸಕ್ತಿ, ಇಲ್ಲವೆ ಹೇಯಬುದ್ಧಿ) ಕ್ರಮವಾಗಿ ತಂದುಕೊಡುವುದು. ನಿರ್ವೇಗವು ಸಮ್ಯಗ್‌ದೃಷ್ಟಿಗಳಾದ ಭವ್ಯ (ಧರ್ಮನಿಷ್ಠ) ರಿಗೆ ಅವರ ಕರ್ಮಬಂಧವು ಶಿಥಿಲವಾಗುವ ಕಾಲವೊದಗಿದಾಗ ಉಂಟಾಗುವುದು. ನಿರ್ವೇಗವನ್ನು ಹೊಂದಿ ಸಂಸಾರವನ್ನು ತೊರೆದು ತಪಸ್ಸಿಗೆ ತೆರಳುವುದು ಜೈನಧರ್ಮೀಯರಿಗೆ ಒಂದು ಶ್ರೇಷ್ಠವಾದ ಆದರ್ಶವು.

ರಾಮಚಂದ್ರಚರಿತಪುರಾಣದಲ್ಲಿ ಹಲವು ಜನ ಭವ್ಯರ ನಿರ್ವೇಗವು ವರ್ಣಿತವಾಗಿದೆ. ಮುದುಕರಷ್ಟೇ ಅಲ್ಲ, ಹೆಣ್ಣುಮಕ್ಕಳೂ, ಹುಡುಗರೂ ನಿರ್ವೇಗದಿಂದ ತೊರೆದುಹೋದ ಉದಾಹರಣೆಗಳನ್ನು ಬೇಕಾದಷ್ಟು ನೋಡಬಹುದು. ಈ ನಿರ್ವೇಗಕ್ಕೆ ದೊಡ್ಡ ಕಾರಣವೇನೂ ಬೇಕಾಗುವುದಿಲ್ಲ. ಕೆಲವರು ತಪಸ್ವಿಗಳ ತಪಶ್ಚರಣೆಯನ್ನು ನೋಡಿ,ಕೆಲವರು ತಮ್ಮ ತಲೆ ನರೆತುದನ್ನು ಕಂಡು, ಕೆಲವರು ಮುಗಿ

---

ಯಲ್ಲಿ ಅತಿ ಶುಭ್ರವೂ ವಿಸ್ತೀರ್ಣವೂ ಆದ ಶಿಲೆಯೊಂದು ಇರುವುದು. ಮೋಕ್ಷವನ್ನು ಪಡೆದ ಜೀವರು ಆ ಶಿಲೆಯ ಮೇಲೆ ಇರುವರು. ಅವರು ಯಾವ ಮನುಷ್ಯದೇಹದಿಂದ ಮುಕ್ತಿಯನ್ನು ಪಡೆಯುವರೋ ಅಷ್ಟು (ಸ್ವಲ್ಪ ಕಡಿಮೆ) ದೇಹಪರಿಮಾಣವುಳ್ಳವರಾಗಿ ಈ ಜಡದೇಹವನ್ನು ತೊರೆದು ಚಿತ್ ಆನಂದಸ್ವರೂಪರಾಗಿರುವರು. ಜೀವರು ಪರಸ್ಪರ ಭಿನ್ನರು. ಅನೇಕ ದೀಪಗಳ ಬೆಳಕುಗಳು ಒಂದರೊಳಗೊಂದು ಸೇರಿಕೊಂಡು ಒಂದೆಡೆಯಲ್ಲಿ ಇರುವಂತೆ ಈ ಜೀವರು ಆ ಸಿದ್ಧಶಿಲೆಯ ಮೇಲೆ ಇರುವರು.

ಎಲ್ಲಿ ಎದ್ದ ಮೋಡವು ಬಯಲಾದುದನ್ನು ನೋಡಿ ನಿರ್ವೇಗವನ್ನು ಹೊಂದುವರು. ಈ ಮಹಾಕಾವ್ಯದ ತೆರೆಯನ್ನೆತ್ತಿದಕೂಡಲೆ ನಮ್ಮ ಕಣ್ಣಿಗೆ ಬೀಳುವುದು ಈ ನಿರ್ವೇಗದ ದೃಶ್ಯವೇ. ಇಕ್ಷ್ವಾಕುವಂಶದ ವಿಜಯರಥಮಹಾರಾಜನ ಮೊಮ್ಮಗನಾದ **ವಜ್ರಬಾಹು**ವಿಗೆ ಕನ್ನಿಕೆಯನ್ನು ಕೊಡುವ ವಿಚಾರದಿಂದ ನಾಗಪುರದ ಇಭವಾಹನ ನೆಂಬ ಅರಸನು ತನ್ನ ಮಗನಾದ **ಉದಯಸುಂದರ**ನನ್ನು ಕನ್ನಿಕೆ ಯೊಡನೆ ವಿಜಯರಥನಲ್ಲಿಗೆ ಕಳುಹಿದನು. ವಿಜಯರಥನು ಈ ಮದು ವೆಗೆ ಒಪ್ಪಿದನು. ವಜ್ರಬಾಹುವಿಗೆ ಈಗ ಅತುಲವಾದ ರಾಜ್ಯೈಶ್ವರ್ಯ, ನೂತನ ತಾರುಣ್ಯ;

ಎರಡುಂ ಪಕ್ಕದೆ ಪಣ್ಣಿದೋಜೆವಿಡಿಯುಂ ಕೈಗೈದು ಬಂದೇರಿ ಚಾ
ಮರಮುಂ ಕನ್ನೆಯರಿಕ್ಕೆ ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್ ।
ಒರೆ ಬಂದಂ ಧವಳಾತಪತ್ರದಡಿಯೊಳ್ಕಾಲ್ಗೋದು ಗಂಧಾಂಧ ಸಿಂ ।
ಧುರಮುಂ ಮೆಯ್ಗಲಿ ವಜ್ರಬಾಹುಮಹಿಪಂ ವಜ್ರಾಯುಧಂ ಒರ್ಪವೋಲ್ ॥ (೨. ೧೧)

—ಈ ಮೆರೆಗೆ ಆಸೆಯನೇರಿ ವಜ್ರಾಯುಧ (ದೇವೇಂದ್ರ) ನಂತೆ ಕಡುಸಡಗರದಿಂದ ನಿಬ್ಬಣಹೊರಟಿದ್ದಾನೆ. ದಾರಿಯಲ್ಲಿ ವಸಂತ ವೈಭವದಿಂದ ಕಾಮೋನ್ಮಾದವನ್ನು ತರುವಂತಹ ವಸಂತವೆಂಬ ಗಿರಿ ಬಂದಿತು. ಅಲ್ಲಿ—

ಮನಮುಂ ಮುಟ್ಟೈಸಿ ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ ತನ್ನಿಂ ।
ತನುವಂ ಬೇರ್ಕೆಯ್ದು ಬಾಹ್ಯೇಂದ್ರಿಯಮನುಡುಗಿ ಕೈಯಿಕ್ಕಿ ನಿರ್ವಾಣಸಾಮ್ರಾ ।

ಜ್ಞಾನಿವಾಸಕ್ಕೊರ್ವಸಂತಮುರ್ಖನಭಿಮುಖನಾದಿತ್ಯಬಿಂಬಕ್ಕೆ
ಯೋಗಿಂ ।
ದ್ರುಸತಂದ್ರಂ ನಿರ್ನಿಮೇಷಂ ನಗನಿಕಟಹಟದ್ರತ್ನಕೂಟಂ
ಬೊಲಿರ್ದಂ ॥
(೨. ೧೪.)

—ಈ ಮೇರೆಗೆ ತಪಸ್ಸಿಗೆ ಕುಳಿತ ಒಬ್ಬ ಮುನಿಯನ್ನು ಕಂಡು ವಜ್ರ ಬಾಹುವು ತಟ್ಟನೆ ನಿರ್ವೇಗವನ್ನು ಹೊಂದಿ ಆ ಮುನಿಯನ್ನು ಎವೆ ಹಳಚದೆ ನೋಡುತ್ತ ನಿಲ್ಲುವನು. ಈತನನ್ನು ಮದುವೆಗೆ ಕರೆದೊಯ್ಯಲು ಬಂದಿದ್ದ ಉದಯಸುಂದರನು ಇದನ್ನು ನೋಡಿ ಬೆರಗಾಗಿ—

ಭಾವ, ಮುನೀಂದ್ರರಂ ಬಿಡದೆ ನೋಡಿದಪ್ಪೆ ಮನವೊಲ್ದೊಡಂ
ತಪಃ ।
ಶ್ರೀವಧು ಕಾಮಿನೀಜನದವೋಲ್ ನಿನಗೀವಳಿಕೂರ್ತುರ್ವಸ್ತ್ರಭೂ।
ಷಾವಳಿಯುಂ ಕಚಾವಳಿಯು ನೀವಧು ಗರ್ವದ ಗಾಳು, ವಸ್ತ್ರಭೂ।
ಷಾವಳಿಯುಂ ಕಚಾವಳಿಯುನಿತ್ತರನಲ್ಲದೆ ಪೊರ್ದಲೀವಳೇ ? ॥
(೨. ೧೯.)

ಎಂದು ಸರಸವಾಡುವನು. ಆಗ ವಜ್ರಬಾಹುವು—ನಾನು ತಪವ ಕೈಕೊಂಡರೆ ನೀನು ಏನ ಮಾಡುವೆ? ಎಂದು ಕೇಳಲು ನಿನ್ನೊಡನೆ ನಾನೂ ತಪವ ಕೈಕೊಳ್ಳುವೆನೆಂದು ಉದಯಸುಂದರನು ಹೇಳುವನು. ವಜ್ರಬಾಹುವಿನ ನಿರ್ವೇಗವು ತೀವ್ರತರವಾದುದು. ಆತನು ಕೂಡಲೆ 'ತೊರೆದು' ಆ ಮುನಿಯ ಬಳಿಯಲ್ಲಿ ತಪಸ್ಸನ್ನು ಕೈಕೊಳ್ಳುವನು. ಮೊದಲೇ ಮಾತುಕೊಟ್ಟಂತೆ ಉದಯಸುಂದರನೂ ತಪಸ್ಸನ್ನು ಕೈಕೊಳ್ಳುವನು. ಉದಯಸುಂದರನು ದೀಕ್ಷೆಗೊಳ್ಳಲು ಸಂಗಡ ಬಂದಿದ್ದ ಆತನ ತಂಗೆ—ಮದುಮಗಳು— ಗುಣೋದೆ ಎಂಬವಳೂ ದೀಕ್ಷೆಗೊಳ್ಳುವಳು! ಮೊಮ್ಮನು ದೀಕ್ಷೆಗೊಂಡುದನ್ನು ಕೇಳಿ ಅತ್ತ

ವಿಜಯರಥಮಹಾರಾಜನು— "ಮದುವೆಗೆ ಪೋಪುದೆತ್ತ! ಗಿರಿ ಕಂದರದೊಳ್ ಮುನಿಯುಂ ಮನಸ್ವಿ ಕಟ್ಟಿದಿರೊಳ್ ಕಾಣ್ಬುದೆತ್ತ?" (೨. ೨೬.) ಎಂದು ಖೇದಪೂರ್ವಕವಾಗಿ ಅಚ್ಚರಿಬಡುವನು. ಈ ಸಂದರ್ಭವು ಯಾರಾದರೂ ಅಚ್ಚರಿಬಡುವಂತಹುದೇ ಸರಿ. ಯುವ ರಾಜನಾದ ಮೊಮ್ಮಗನು ದೀಕ್ಷೆಗೊಂಡುದನ್ನು ಕಂಡು ವಿಜಯ ರಥನು ಇನ್ನೊಬ್ಬ ಮೊಮ್ಮಗನಾದ **ಪುರಂದರ**ನಿಗೆ ರಾಜ್ಯವನ್ನು ಕೊಟ್ಟು ದೀಕ್ಷೆಗೊಂಡನು. ಕೆಲಕಾಲದಲ್ಲಿ ಪುರಂದರನೂ ದೀಕ್ಷೆ ಗೊಳ್ಳುವನು. ಈತನ ಮಗ **ಕೀರ್ತಿಧರನು** ತಾರುಣ್ಯದ ಆರಂಭ ದಲ್ಲಿಯೇ ಸೂರ್ಯಗ್ರಹಣವನ್ನು ಕಂಡು ನಿರ್ವೇಗ ಹೊಂದುವನು; ಆದರೆ ಮಗನನ್ನು ಹಡೆಯುವವರೆಗೆ ನೀನು ರಾಜ್ಯಭಾರವನ್ನು ವಹಿ ಸಿರಬೇಕೆಂದು ಮಂತ್ರಿಗಳು ಬಲುಮೆಮಾಡಲು ಆತನು ಹೇಗೋ ಕಷ್ಟದಿಂದ ಅಲ್ಲಿಯವರೆಗೆ ನಿಂತು ಮಗನು ಹುಟ್ಟಿದುದನ್ನು ತಿಳಿದೊ ಡನೆ ದೀಕ್ಷೆಗೊಳ್ಳುವನು. ಈ ಹುಟ್ಟಿದ ಸಣ್ಣಮಗನು ಎಲ್ಲಿ ದೀಕ್ಷೆ ಗೊಳ್ಳುವನೋ ಎಂದು ಆತನ ತಾಯಿ ಎಷ್ಟೋಕಾಲ ಆತನಿಗೆ ಮುನಿ ದರ್ಶನವಾಗದಂತೆ ನೋಡಿಕೊಳ್ಳುತ್ತಿದ್ದರೂ ಕೊನೆಗೆ ಆತನೂ ತಾರುಣ್ಯದಲ್ಲಿಯೇ ದೀಕ್ಷೆಗೊಂಡನು!

ಮೋಕ್ಷವೇ ಜೀವರ ಕೊನೆಯ ಧ್ಯೇಯವಾಗಿರುವುದರಿಂದ ಅದಕ್ಕೆ ಸಾಧಕವಾದ ದೀಕ್ಷಾಗ್ರಹಣವೂ, ದೀಕ್ಷಾಗ್ರಹಣಕ್ಕೆ ಬೇಕಾ ಗುವ ನಿರ್ವೇಗವೂ ಇಕ್ಷ್ವಾಕುವಂಶದಲ್ಲಿ—ರಾಮಚಂದ್ರನ ವಂಶ ದಲ್ಲಿ— ಇಷ್ಟುಮಟ್ಟಿಗೆ ವಾಡಿಕೆಯಾಗಿರುವುದನ್ನು ಈ ಪುರಾಣದ ಆರಂಭದಲ್ಲಿಯೇ ಹೇಳಿ ಕವಿಯು ಈ ಪುರಾಣವನ್ನೋದುವವರ ಮತ್ತು ಕೇಳುವವರ ಮನಸ್ಸಿನ ಮೇಲೆ ಜೈನಧರ್ಮದ ಒಂದು ಮಹತ್ತ್ವದ ಆಚರಣೆಯ ಪರಿಣಾಮವಾಗುವಂತೆ ಪ್ರಯತ್ನಿಸಿರು ವನು. ಮಹಾ ವೈಭವಶಾಲಿಗಳಾದ ರಾಜರೂ, ರಾಜಕುಮಾರರೂ

ನಿರ್ವೇಗ ಹೊಂದಿ ತಪಶ್ಚರಣನಿರತರಾಗಿ ಮೋಕ್ಷಪಥವನ್ನು ಹಿಡಿದು ದರ್ಶನೋದಿ ಸಮ್ಯಗ್ದೃಷ್ಟಿಯಾದ ಯಾವ ಭವ್ಯನೂ ಕ್ಷಣಕಾಲ ವಾದರೂ '**ರಾಟಳದ ಗುಂಡಿಗೆ**'ಯಂತೆ ಜನನಮರಣ ಚಕ್ರರೂಪ ವಾದೀ ಸಂಸಾರಕ್ಕೆ ಹೇಸದಿರಲಾರನು.

ಈ ಸಂಸಾರಚಕ್ರವು ಅನಾದಿಯೆಂಬುದನ್ನು ವೈದಿಕಧರ್ಮ ದಂತೆ ಜೈನಧರ್ಮವೂ ಬೌದ್ಧಧರ್ಮವೂ ಹೇಳುವುವು. **ಬುದ್ಧ ದೇವನು** ಒಂದೆಡೆಯಲ್ಲಿ ಹೀಗೆ ಹೇಳಿದ್ದಾನೆ—

"ಎಲೈ ಮಾನವನೇ, ನಿನ್ನ ಗತಜನ್ಮಗಳ ದೇಹಗಳ ಎಲುವುಗಳ ನ್ನೆಲ್ಲ ಒಟ್ಟುಗೂಡಿಸಿದ್ದರೆ ಆ ರಾಶಿಯು ಹಿಮಾಲಯದಷ್ಟು ದೊಡ್ಡ ದಾಗುತ್ತಿತ್ತು! ನೀನು ಕುಡಿದ ತಾಯಿ ಎದೆಹಾಲನ್ನು ಒಂದೆಡೆಗೆ ಮಾಡಿದ್ದರೆ ಅದು ಚತುಃಸಮುದ್ರಗಳ ನೀರಿಗಿಂತ ಹೆಚ್ಚಾಗುತ್ತಿತ್ತು!"

ಜೈನ ಬೌದ್ಧಧರ್ಮಗಳಲ್ಲಿ ಜ್ಞಾನಿಗಳು **ಭವಾವಳಿಯನ್ನು** ಎಂದರೆ ಮನುಷ್ಯನ ಹಿಂದಿನ ಹತ್ತೆಂಟು ಜನ್ಮಗಳ ವೃತ್ತಾಂತಗಳನ್ನು ಹೇಳಿ ಜನನಮರಣ ಚಕ್ರದ ಕಲ್ಪನೆಯನ್ನು ತಂದುಕೊಟ್ಟು ಸಂಸಾರನಿರ್ವೇಗವುಂಟಾಗುವಂತೆ ಮಾಡುವುದು ವಾಡಿಕೆ. ರಾಮ ಚಂದ್ರಚರಿತಪುರಾಣದಲ್ಲಿ ದಶರಥ, ಸೀತೆ, ರಾಮ, ವಿಭೀಷಣ, ಕುಂಭ ಕರ್ಣ ಮೊದಲಾದ ಹಲವರು ತಮ್ಮ ಭವಾವಳಿಯನ್ನು ಕೇಳಿ ಸಂಸಾರ ವನ್ನು ತೊರೆದ ವರ್ಣನೆಯುಂಟು.

**ರಾಮಚಂದ್ರಚರಿತಪುರಾಣವೂ ಪ್ರಧಾನವ್ಯಕ್ತಿಗಳೂ:—**

(೧) **ರಾಮಚಂದ್ರ**—ಅನಂತಾನಂತವಾದೀ ಕಾಲದಲ್ಲಿ ಪ್ರತಿ ಯೊಂದು ಭೂತ,ವರ್ತಮಾನ,ಭವಿಷ್ಯತ್ಕಾಲದಲ್ಲಿ ೬೩ಜನ ಮಹಾಪುರು ಷರು ಉದಯಿಸುವರು. ಅವರಿಗೆ **ತ್ರಿಷಷ್ಟಿ** (೬೩) **ಶಲಾಕಾಪುರುಷ** ರೆಂಬ ಹೆಸರು ಅವರು:—೨೪ಜನ **ತೀರ್ಥಂಕರರು**,* ೧೨ಜನ **ಚಕ್ರ**

---

* **ತೀರ್ಥಂಕರರು**—ಋಷಭ, ಅಜಿತ, ಚಂದ್ರಪ್ರಭ, ಮಲ್ಲಿನಾಥ,

**ವರ್ತಿ**ಗಳು, ೯ ಜನ **ಬಲಭದ್ರ**ರು, ೯ ಜನ **ನಾರಾಯಣ**ರು, ೯ ಜನ **ಪ್ರತಿನಾರಾಯಣ**ರು. ಇವರಲ್ಲಿ ತೀರ್ಥಂಕರರೆಂಬವರು **"ಕೇವಲ ಜ್ಞಾನ"** ಎಂಬ ಪೂರ್ಣಜ್ಞಾನವನ್ನು ಪಡೆದವರು. ಅದೇ ಜನ್ಮದಲ್ಲಿ ಅವರಿಗೆ ಮೋಕ್ಷವು. ಅವರು ಜಗತ್ತಿನ ಕಲ್ಯಾಣ ಕ್ಕಾಗಿ ಧರ್ಮೋಪದೇಶಮಾಡುವರು. ಉಳಿದ ಶಲಾಕಾಪುರುಷರಲ್ಲಿ ಕೆಲವರು ಅದೇ ಜನ್ಮದಲ್ಲಿ,ಕೆಲವರು ಮುಂದಿನ ಯಾವುದೊಂದು ಜನ್ಮ ದಲ್ಲಿ ಮೋಕ್ಷವನ್ನೈದುವರು. ಬಲದೇವರಲ್ಲಿ ಎಂಟು ಜನರು ಅದೇ ಜನ್ಮದಲ್ಲಿ ಮೋಕ್ಷಗಾಮಿಗಳು. ೯ನೆಯವನು ಈಗ ಸ್ವರ್ಗಗಾಮಿ ಯಾಗಿದ್ದರೂ ೯ನೆಯ ಕೃಷ್ಣನೆಂಬ ನಾರಾಯಣನು ಮುಂದಿನ ಕಾಲ ದಲ್ಲಿ ತೀರ್ಥಂಕರನಾದಾಗ ಅವನಿಗೆ ಗಣಧರನಾಗಿ ಮುಕ್ತನಾಗು ವನು. ಈ ಶಲಾಕಾಪುರುಷರಲ್ಲದೆ ೯ ಜನ **ನಾರದ**ರು, ೧೧ ಜನ **ರುದ್ರ**ರು ಮೊದಲಾದವರೂ ಕಾಲಕಾಲಕ್ಕೆ ಉದಯಿಸುವರು. ನಾರಾಯಣರು, ನಾರದರು, ರುದ್ರರು ಇವರು ಅಸತ್ಕರ್ಮಫಲ ಭೋಗಕ್ಕಾಗಿ ನರಕಕ್ಕಿಳಿಯುವರು;ಆದರೆ ಮುಂದೆ ಮತ್ತೆ ಸತ್ಕರ್ಮ ಪರಿಣಾಮದಿಂದ ಉತ್ಕ್ರಾಂತಿ ಹೊಂದಿ ಮೋಕ್ಷಗಾಮಿಗಳಾಗು ವರು. ಇವರೆಲ್ಲರೂ ಜೀವರೇ. ಜೀವರೇ ಸಂಸಾರದಿಂದ ಮುಕ್ತ

---

ನೇಮಿನಾಥ, ಪಾರ್ಶ್ವನಾಥ, ವರ್ಧಮಾನ ಮುಂ. ೨೪ ಜನರು. ಇವರೇ ದೇವರು, ಪರಮೇಶ್ವರರು.

**ಚಕ್ರವರ್ತಿ**ಗಳು—ಭರತ, ಸಗರ ಮುಂ.

**ಬಲದೇವರು**—ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ. (ವರ್ತಮಾನಕಾಲದವರು).

**ನಾರಾಯಣರು**—ತ್ರಿಪುಷ್ಟ, ದ್ವಿಪುಷ್ಟ, ಸ್ವಯಂಭು, ಪುರುಷೋತ್ತಮ, ನರಸಿಂಹ, ಪುಂಡರೀಕ, ದತ್ತದೇವ, ಲಕ್ಷ್ಮಣ, ಕೃಷ್ಣ.

**ಪ್ರತಿನಾರಾಯಣರು**—ಅಶ್ವಗ್ರೀವ, ತಾರಕ, ಮೇರಕ, ನಿಶುಂಭ, ಮಧುಕೈಟಭ, ಪ್ರಹ್ಲಾದ, ಬಲಿಸೇನ, ರಾವಣ, ಜರಾಸಂಧ.

ರಾಗಲು ಪರಮಾತ್ಮರಾಗುವರು. **ಶ್ರೀರಾಮನು** ಶಲಾಕಾಪುರುಷ ರಲ್ಲಿ **ಆನೆಯ ಬಲದೇವನು.** ಪರಮಾತ್ಮನಾದ ವಿಷ್ಣುವಿನ ಅವ ತಾರವಲ್ಲ. (ಪರಮಾತ್ಮನು ಮತ್ತೆ ಸಂಸಾರಿಯಾಗಿ ಅವತಾರವನ್ನೆ ತ್ತುವುದು ಸಂಭವಿಸುವುದಿಲ್ಲವೆಂಬುದು ಜೈನಮತವು.) ಈತನು ಉತ್ಕ್ರಾಂತಿ ಹೊಂದಿ ಮೇಲಿನ ತರಗತಿಯನ್ನೈದಿದ ಜೀವನು. ಅನೇಕಾನೇಕ ಜನ್ಮಗಳನ್ನು ಕಳೆದು ಆನೆಯ ಬಲದೇವನಾಗಿ ಉದ ಯಿಸಿದನು. ಇನ್ನೂ ಈತನ ಕರ್ಮಬಂಧವು ಉಳಿದಿದೆ; ಇನ್ನೂ ಈತನಿಗೆ ಕಷಾಯಗಳು (=ಕ್ರೋಧ, ಮಾನ, ಮಾಯಾ, ಲೋಭಗಳು) ಉದಯಿಸುತ್ತಿವೆ; ಇನ್ನೂ ಈತನಿಗೆ ಜ್ಞಾನೋದಯವಿಲ್ಲ. ಅಂತೆಯೇ ಈತನು ಸೀತಾವಿಯೋಗದಲ್ಲಿ ಅಳಲುವನು. ಹಲವು ಮದುವೆಗಳನ್ನು ಮಾಡಿಕೊಳ್ಳುವನು.† ವೈರಿಯ (ರಾವಣನ) ನಾಶಕ್ಕಾಗಿ ಹಲವು ಆರಂಭ (ಕಾರ್ಯ) ಗಳನ್ನು ಮಾಡುವನು. ಬಂಧುಪ್ರೇಮದ ಅತಿ ರೇಕದಿಂದ ಲಕ್ಷ್ಮಣನ ಶವವನ್ನು ಹೊತ್ತುಕೊಂಡು ಆರುತಿಂಗಳು ತಿರುಗಾಡುವಷ್ಟು ಮೋಹವು ಅವನಲ್ಲಿ ಕಾಣಬರುವುದು. ವಜ್ರ ಕರ್ಣ ಮೊದಲಾದ ವೀರವ್ರತಿಗಳಾದ ಭವ್ಯರಲ್ಲಿ ಪ್ರೀತಿ, ರಾವಣ, ಸಿಂಹೋದರ ಮುಂತಾದ ದುರ್ವೃತ್ತರಲ್ಲಿ ದ್ವೇಷ ಮುಂತಾದ ಮನೋವಿಕಾರಗಳು ಈತನಲ್ಲಿ ಉಂಟಾಗುತ್ತಿವೆ. ಹೀಗಿದ್ದರೂ ಶ್ರೀರಾಮನು ಇದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುವವನು. ಆತನು ಉದಾತ್ತನು, ತಂದೆಯ ಮಾತಿಗಾಗಿ ರಾಜ್ಯಲೋಭವನ್ನು ತಟ್ಟನೆ ತೊರೆದವನು ಸತ್ಯಸಂಧನು; ಸುಶೀಲನು; ಅಸತ್ಕರ್ಮಗಳು ಅವನಿಂದ ಘಟಿಸುವುದು ಕಡಿಮೆ. ರಾವಣವಧೆಯನ್ನು ಲಕ್ಷ್ಮಣನು

---

† ರಘುವದೇವನುಂ ಜನಕಸುತೆಯುಂ, ಪ್ರಭಾವತಿಯುಂ, ರತಿಯುಂ, ಶ್ರೀಕಾಂತೆಯುಮೆಂಬ ನಾಲ್ವರ್ ಮಹಾದೇವಿಯರ್ ಮೊದಲಾಗೆಯೆಣ್ಭಾಸಿರಮಂ ತಃಪುರಕ್ಕಧಿಪನಾದಂ (೧೫. ೬೨.)

ಮಾಡುವನು. ತನ್ನ ವೈರಿಯಾಗಿದ್ದವನೂ ಕೂಡ ಧರ್ಮಾಚರಣೆ ಯಲ್ಲಿ ತೊಡಗಿದಾಗ ಆತನನ್ನು ತೊಂದರೆಬಡಿಸಲಾರದಷ್ಟು ಧಾರ್ಮಿ ಕನು. ರಾಮಚಂದ್ರನ ಕಡುಹಗೆಯಾದ ರಾವಣನು, ಯುದ್ಧವು ನಡೆದಾಗ ವಿದ್ಯಾಸಾಧನೆಯ ತಪಸ್ಸಿಗೆ ಕುಳಿತಿದ್ದನು. ಆ ತಪಸ್ಸು ಪೂರ್ಣವಾಗಿದ್ದರೆ ಆತನು ಅಜೇಯನಾಗುತ್ತಿದ್ದನು. ಆತನ ಧ್ಯಾನಕ್ಕೆ ಭಂಗವನ್ನುಂಟುಮಾಡಿದರೆ ಆತನ ತಪಸ್ಸು ಕೆಡುವುದೆಂದು ಹಲವರು ಸಲಹೆ ಹೇಳಿದರೂ ರಾಮನು—

ವನಿತೆಗೆ, ಕೈದುವಂ ಬಿಸುಟುವಂಗಿದಿರಾಗನವಂಗೆ ಭೂಭುಜಂ।
ಮುನಿವುದು ಪಾಟಿಯಲ್ತು ನಿಯಮಸ್ಥಿತನಾಗಿ ದಶಾನನಂ
ಜಿನೇಂ।
ದ್ರನ ಮುಂದಿರ್ದೊಕ್ಕು ಸಾಧಿಸಿದಪಂ ಗಡ ವಿದ್ಯೆಯನೆಂತೊ
ಬಾಧೆಯಂ।
ಜಿನಿಯಿಪುದಾತನೊಳ್ ಬಿಸುಡತಕ್ಕುದನಂತು ಸಿರಲ್ಕೆ ತಕ್ಕುದೇ?॥
(೧೪. ೮೭.)

ಇಷ್ಟರಮಟ್ಟಿಗೆ ಪಾಪಭೀರುತನವನ್ನು ತೋರ್ಪಡಿಸಿದನು. ಆಗ ವಿಭೀಷಣಾದಿಗಳು ಮಹಾಸತ್ವನಾದೀತನು ಎಂದೂ ಅನಾಚಾರವ ನ್ನೊಪ್ಪುವನಲ್ಲವೆಂದು ಹೊಗಳುವರು. ರಾಮಚಂದ್ರನಿಗೆ ಆತನ ಆಯುಷ್ಯದ ಕೊನೆಕೊನೆಗೆ ನಿರ್ವೇಗದಿಂದ ಉಪಶಮವುಂಟಾಗು ವುದು. ಬಳಿಕ ಆತನು ದೀಕ್ಷೆಗೊಂಡು ಯತಿಯಾಗಿ, ತಪವನ್ನಾಚ ರಿಸಿ ಅವಧಿಜ್ಞಾನವನ್ನೂ‡ ಕ್ರಮದಿಂದ ಅನಶನವ್ರತ, ಶುಕ್ಲ

‡ ಜೈನಧರ್ಮದಲ್ಲಿ **ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಾಯಜ್ಞಾನ, ಕೇವಲಜ್ಞಾನ** ಎಂದು ಜ್ಞಾನದಲ್ಲಿ ೫ ತರಗತಿಗಳು. ಕೇವಲಜ್ಞಾನವು ಸಂಪೂರ್ಣಜ್ಞಾನವು; ಅವಧಿಜ್ಞಾನವು ಮರ್ಯಾದಿತವಾದುದು.

ಧ್ಯಾನಗಳಿಂದ§ ಕೇವಲ ಜ್ಞಾನವನ್ನೂ ಪಡೆಯುವನು. ಒಳಿಕ ಅವ ಶಿಷ್ಟವಾದ ಸಮಸ್ತಕರ್ಮಗಳನ್ನು ನಿರ್ಮೂಲ ಮಾಡಿ ಜೀವನ ಸ್ವಾಭಾವಿಕವಾದ ಊರ್ಧ್ವಗತಿಯನ್ನು ಪಡೆದು ಸಿದ್ಧಶಿಲೆಯನ್ನೇರಿ ಶಾಶ್ವತ ಮುಕ್ತಿಯನ್ನು ಪಡೆಯುವನು.

ರಾಮನು ಜೀವನು; ಆವರೂ ಉತ್ಕ್ರಾಂತಿ ಹೊಂದುತ್ತ ಬಲ ದೇವನಾಗಿರುವನು. ಸನ್ಮಾರ್ಗದಲ್ಲಿ ನಡೆದು ಜೀವರ ಕೊನೆಯ ಧ್ಯೇಯ ವಾದ ಮೋಕ್ಷವನ್ನು ಅದೇ ಜನ್ಮದಲ್ಲಿ ಪಡೆಯುವನು. ಈ ಕಾರಣ ಗಳಿಂದ ರಾಮನು ಜೈನರಿಗೆ ಪೂಜ್ಯನು.

(೨) **ಲಕ್ಷ್ಮಣ**— ಈತನು ಅತ್ಯದ್ಭುತ ಶಕ್ತಿ ಶೌರ್ಯಗಳುಳ್ಳ ವನು. ಹಲವು ಕಾರ್ಯಗಳನ್ನು ಮಾಡುವನು. ಶಲಾಕಾಪುರುಷ ರಲ್ಲಿ ಲನೆಯ ನಾರಾಯಣನು. ನಾರಾಯಣರು ತಮ್ಮ ಅಣ್ಣಂದಿ ರಾದ ಬಲದೇವರಿಗೆ ಅಂಕಿತರಾಗಿ ನಡೆಯುವನರು. ಆದುದರಿಂದ ಲಕ್ಷ್ಮಣನು ರಾಮನಿಗೆ ಅಂಕಿತನು. ನಾರಾಯಣರ ಕರ್ಮಬಂಧವು ಬಲದೇವರಿಗಿಂತ ಹೆಚ್ಚಿಗೆ. ಕಷಾಯಗಳೂ ಹೆಚ್ಚಿಗೆ. ರಾಮನು ರಾಜ್ಯ ತ್ಯಾಗ ಮಾಡಿ ಹೊರಟಾಗ ಭರತನು ಆ ರಾಜ್ಯಕ್ಕೆ ಒಡಂಬಟ್ಟನೆಂಬು ದನ್ನು ಕೇಳಿ ಲಕ್ಷ್ಮಣನು—

ಕಾರಾಗಾರದೊಳಿಂದ್ರನಂ ಸೆರೆಯಿಡಲ್ ಗೋತ್ರಾದ್ರಿಯಂ<br>ಚಾಳಿಸಲ್ ।<br>ತಾರಾಮಂಡಲಮಂ ನೆಲಕ್ಕೆ ನೆಲನಂ ವ್ಯೋಮಕ್ಕೆ ಪಕ್ಕಾಗಿಸಲ್ ।<br>ಪಾರಾವಾರದ ನೀರನೀಂಟಲಖಿಳಾಶಾದಂತಿದಂತಂಗಳಂ ।<br>ಬೇರಿಂದಂ ಕಿಳಲಂದದೇಂ ಬಗೆದನೋ ರಕ್ಷೋಕ್ಷಣಂ ಲಕ್ಷ್ಮಣಂ ॥<br>( ೬. ೧೩೯ )

---

§ **ಶುಕ್ಲಧ್ಯಾನ**—ಶುಭವನ್ನು —ಪರಿಶುದ್ಧವಾದುದನ್ನು ಚಿಂತಿಸುವುದು.

ಇಷ್ಟು ಮಾತ್ರಕ್ಕೆ ಕೋಪಗೊಳ್ಳುವನು. ಲಕ್ಷ್ಮಣನಿಗೆ ಮದುವೆ ಗಳು ಬಹಳ. ಆತನ ಹೆಂಡಿರ ಸಂಖ್ಯೆ ಬಹಳ ದೊಡ್ಡದು. ‡ ಯುದ್ಧ ಗಳಲ್ಲಿ ಅಸಂಖ್ಯ ಪ್ರಾಣಹಾನಿಯು ಇವನಿಂದ ಘಟಿಸುವುದು. ಈ ಮೇರೆಗೆ ಬಹ್ವಾರಂಭಗಳಲ್ಲಿ ತೊಳಲುವನು. ಕೊನೆಯಲ್ಲಿ ಇಬ್ಬರು ದೇವತೆಗಳು ರಾಮನು ಸತ್ತನೆಂಬಂತೆ ಮಾಯಾ ದೃಶ್ಯವನ್ನು ತೋರಿ ಸಲು ಲಕ್ಷ್ಮಣನು ಮೋಹಪರವಶನಾಗಿ **ಆರ್ತಧ್ಯಾನ**ದಿಂದ* ಪ್ರಾಣವನ್ನು ಬಿಡುವನು. ನಾರಾಯಣರೆಲ್ಲ ನರಕಕ್ಕೀಳಿಯುವುದ ರಿಂದ ಲಕ್ಷ್ಮಣನು ನರಕಕ್ಕಿಳಿಯುವನು. ಆದರೂ ಮುಂದೆ ಉತ್ಕ್ರಾಂ ತಿಯನ್ನು ಹೊಂದಿ ಒಬ್ಬ ಚಕ್ರವರ್ತಿಗೆ ಮೇಘರಥನೆಂಬ ಮಗನಾಗಿ ಹುಟ್ಟಿ ಮತ್ತೆ ದೇವನಾಗಿ ಬಳಿಕ ಸುವ್ರತಕೀರ್ತಿಯೆಂಬ ಅರಸನಾಗಿ ಹುಟ್ಟಿ, ಮತ್ತೆ ತಪವನ್ನಾಚರಿಸಿ ಹೀಗೆ ಉತ್ಕ್ರಾಂತಿ ಹೊಂದುತ್ತ ಭವಿಷ್ಯತ್ಕಾಲದಲ್ಲಿ ಮೋಕ್ಷವನ್ನೈದುವನು.

( ೩ ) **ರಾವಣ**— ರಾವಣನು ಶಲಾಕಾ ಪುರುಷರೊಳಗಿನ **ಎಂಟನೆಯ ಪ್ರತಿನಾರಾಯಣನು**. ಪ್ರತಿನಾರಾಯಣರು ನಾರಾ ಯಣರ ವೈರಿಗಳು. ಆದುದರಿಂದ ರಾವಣನು ಲಕ್ಷ್ಮಣನ ವೈರಿಯು. ರಾವಣನು ರಾಕ್ಷಸನಲ್ಲ; ರಾಕ್ಷಸ ದ್ವೀಪವಾಸಿ; ರಾಕ್ಷಸ ಎಂಬುದು

‡ " ಲಕ್ಷ್ಮಣಂ......ಪದಿನೆಣ್ಛಾಸಿರ ಮವರೋಧವಧೂ ಜನಕ್ಕೆ ವಲ್ಲಭ ನಾಪಂ " ( ಇ. ೬೨. ) ಶ್ರೀಕೃಷ್ಣನಿಗೆ ೧೬ ಸಾವಿರ ಹೆಂಡಿರು; ಭರತೇಶ ವೈಭವ ದಲ್ಲಿ–ಭರತ ಮಹಾರಾಜನಿಗೆ ೯೬ ಸಾವಿರ ಹೆಂಡಿರು. ಬಹು ಪತ್ನೀಕತ್ವವು ವೈಭವ ದ್ಯೋತಕವೆಂದು ತಿಳಿದ ಕಾಲವು ಅದು.

* **ಆರ್ತಧ್ಯಾನ**— ಇಷ್ಟಜನ, ವಿಯೋಗ, ರೋಗ, ಪ್ರಾಣಾಪಾಯ ಮೊದಲಾದ ಪ್ರಸಂಗಗಳಲ್ಲಿ ಆ ದುಃಖದ ನಿವೃತ್ತಿಗಾಗಿ ಚಿಂತಿಸುವುದು. ಧ್ಯಾನವು ಆರ್ತಧ್ಯಾನ, ರೌದ್ರಧ್ಯಾನ, ಧರ್ಮ್ಯಧ್ಯಾನ, ಶುಕ್ಲಧ್ಯಾನ ಎಂದು ನಾಲ್ಕು ಬಗೆ ಯಾಗಿವೆ.

ರಾವಣನ ಪೂರ್ವಜರಲ್ಲೊಬ್ಬನ ಅಂಕಿತನಾಮವು. ರಾವಣನು ಘನವಾದ ಖೇಚರ ವಂಶದವನು. ಆತನು ದಶಕಂಠನಲ್ಲ,ಏಕಕಂಠನು.ಭೀಮ ರಾಕ್ಷಸನು ಕೊಟ್ಟ ನವಮುಖರತ್ನಭೂಷಣದ ಮಾಣಿಕಗಳಲ್ಲಿ ಆತನ ಮುಖವು ಹಲವಾಗಿ ಪ್ರತಿಬಿಂಬಿಸಲು ದಶಮುಖನೆಂಬ ಹೆಸರು ಬಂದಿತು. ಆತನು ಸುಂದರನು. (೯. ೧೬೫.) ಮಹಾ ಪರಾಕ್ರಮಿ. 'ಶೌಚಾಚಾರ ಪರಾಯಣ'ನು. ಅನಂತವೀರ್ಯ ಕೇವಲಿಗಳ ಬಳಿಯಲ್ಲಿ ಪರಾಂಗನಾವಿರತಿ (ಪರಸ್ತ್ರೀಯರಲ್ಲಿ ಅನಾಸಕ್ತಿ) ವ್ರತವನ್ನು ಕೈಕೊಂಡವನು. ಪ್ರಾಣಿಹಿಂಸೆಗೆ ವಿರೋಧಿಯು. ಮರುತ್ತನೆಂಬ ಅರಸನು ಪ್ರಾಣಿಹಿಂಸೆಯನ್ನೊಳಗೊಂಡ ಯಜ್ಞವನ್ನು ಮಾಡುವನೆಂಬ ಸುದ್ದಿಯನ್ನು ಕೇಳಿ ಅಲ್ಲಿಗೆ ಹೋಗಿ ಯಜ್ಞಪಶುಗಳನ್ನು ಬಿಡಿಸಿ, ಯೂಪಸ್ತಂಭಗಳನ್ನು ಕಿತ್ತು, ಕುಂಡಗಳನ್ನೊಡೆದು, ಸಂವರ್ತ' ಮೊದಲಾದ ಋತ್ವಿಜರನ್ನು ಬೆದರಿಸಿ ಯಜ್ಞಧ್ವಂಸವನ್ನು ಮಾಡಿದ್ದನು. (೧೦. ೧೮೩). ಆತನು ಪಾಪಾಚರಣೆಯುಳ್ಳವನಲ್ಲ; ಆದರೂ ಕರ್ಮವಶದಿಂದ ಸೀತಾಪಹರಣದಂತಹ ಕೆಲವು ಪಾತಕಗಳು ಆತನಿಗೆ ಘಟಿಸಿದುವು. ಸೀತಾಪಹರಣ ಮಾಡಿ ಕೊನೆಗೆ ಆತನು ತನ್ನ ಆಚರಣೆಗೆ ತಾನೇ ಜುಗುಪ್ಸೆ ಪಡುವನು—

ಇವರಂ ಪ್ರಾಣಪ್ರಿಯರಂ।
ನೆವಮಿಲ್ಲದೆ ಕರ್ಮವಶಮೆ ನೆವಮೆನೆ ಕಂದ।
ರ್ಪವಿಮೋಹದಿಂದಗಲ್ಚಿದೆ।
ನವಿವೇಕಿಯೆನೆನ್ನ ಕುಲದ ಪೆಂಪಲಿಪಿನೆಗಂ (೧೪. ೧೩೫.)

ಕೇವಲ ಅಭಿಮಾನಕ್ಕಾಗಿ ಆತನು ಸೀತೆಯನ್ನು ಮರಳಿ ರಾಮನಿಗೆ ಒಪ್ಪಿಸಲಿಲ್ಲ. ರಾವಣನು ಅಹಿಂಸಾ ಧರ್ಮನಿಷ್ಠನು. [ಯುದ್ಧಕಾಲದಲ್ಲಿ ವಿದ್ಯಾಸಾಧನೆ ಮಾಡುವಾಗ--ಲಂಕಾ ನಗರದೊಳಂ ಹಿಂಸೆ ಬೇಡೆಂದು ಗೋಷಣೆಗಲಿಸಿದು ಜಿನಪೂಜೆಯಂ ಪ್ರತಿದಿನಂ ಮಾಡಿಸಿಂತು

ನಿಯಮಿಸಿ ೧೪. ೮೩. ] ರಾವಣನ ಅರಮನೆಯಲ್ಲಿ ನಿತ್ಯ ಪೂಜೆಗೆ **ಶಾಂತೀಶ್ವರ** ಜಿನೇಶ್ವರನ ಮಂದಿರವಿದ್ದಿತು. ರಾವಣನು ಯುದ್ಧದಲ್ಲಿ ರೌದ್ರಧ್ಯಾನದಿಂದ§ ಮರಣ ಹೊಂದಿದುದರಿಂದ ನರಕಗತಿಯನ್ನು ಪಡೆದಿದ್ದರೂ ಕ್ರಮದಿಂದ ಉತ್ಕ್ರಾಂತಿಯನ್ನು ಹೊಂದುತ್ತ ಭವಿಷ್ಯತ್ಕಾಲದಲ್ಲಿ ತೀರ್ಥಂಕರನಾಗಿ ಜನಿಸಿ ಮೋಕ್ಷವನ್ನೈದುವನು.

**(೪) ಸೀತೆ—** ಪ್ರತಿವ್ರತಾ ಶಿರೋಮಣಿ. ಕಷ್ಟಮಯವಾದ ವನವಾಸದಲ್ಲಿ ಪತಿಯನ್ನು ಹಿಂಬಾಲಿಸಿದಳು. ಹಲವು ಕಷ್ಟಗಳನ್ನು ತಾಳ್ಮೆಯಿಂದ ಅನುಭೋಗಿಸಿದಳು. ಖಚರ ರಾಜನೂ, ಮಹಾ ಪರಾಕ್ರಮಿಯೂ, ಸುಂದರನೂ ಆದ ರಾವಣನು ಬೇಕಾದಷ್ಟು ಪ್ರಲೋಭನಗಳನ್ನು ತೋರಿಸಿದರೂ ತನ್ನ ಶೀಲದಿಂದ ಎಳ್ಳಷ್ಟೂ ಕದಲಲಿಲ್ಲ. 'ಜಿನಾಗಮ ಕೋವಿದ'ಳು. ರಾಮನು ತನ್ನನ್ನು ಪರಿತ್ಯಜಿಸಿ ವನದಲ್ಲಿ ಬಿಸುಡಿಸಿದಾಗ ಆತನಿಗೆ "ರಾಮದೇವರ್........ದೇವಗುರು ಪಾದ ಪೂಜೆಯಂ ಮಱೆಯದಿರ್ಪುದು. ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದು ಅರ್ಹತ್ಪರಮೇಶ್ವರ ಶ್ರೀ ಧರ್ಮಮಂ ಬಿಸುಡದಿರ್ಪುದು ಎನಗೆ ದಯೆಗೆಯ್ವರಪ್ಪೊಡೆ " ( ೧೫. ೭೫. ) ಎಂದು ಹೇಳಿ ಕಳುಹಿದಳು. ಕೇವಲ ವಿರಕ್ತೆ; ಪರಿತ್ಯಕ್ತೆಯಾದ ತನ್ನನ್ನು ರಾಮನು ಮತ್ತೆ ಪರಿಗ್ರಹಿಸಿದ ಬಳಿಕ ಆಕೆ—ಮುನ್ನುಪಾರ್ಜಿಸಿದ ಕರ್ಮಮೆನಗೆ ಪಿರಿದಪ್ಪ ದುಃಖಮಂ ಮಾಡಿದೊಡಾ ಕರ್ಮಕ್ಕೆ ಮುಳಿವೆನಲ್ಲದುೞಿದವರ್ಗ ದೇಕೆ ಮುಳಿವೆಂ,........ಕೇಡಿಲ್ಲದ ಮೋಕ್ಷಸುಖಕ್ಕೆ ಕಾರಣಮಪ್ಪ ತಪಮಂ ಕೈಕೊಳ್ವೆನೆಂದು ತನ್ನ ಸಹಸ್ರ ಕುಂತಲಂಗಳಂ ಪಱಿದು ಮುಂದಿಕ್ಕಿದಳು; ಮತ್ತು ಪೃಥುಮತಿ ಕಂತಿಯರ ಪಕ್ಕದಲ್ಲಿ ತಪಂ

§ ರೌದ್ರಧ್ಯಾನದಲ್ಲಿ ಪರಹಿಂಸೆಯಿಂದ ಆನಂದಬಡುವುದಿರುವುದು, ಆದುದರಿಂದ ಯುದ್ಧದಲ್ಲಿ ಮೃತರಾದವರು ಸ್ವರ್ಗವನ್ನೈದುವುದಿಲ್ಲ. ["ಹತೋವಾ ಪ್ರಾಪ್ಸ್ಯಸಿ ಸ್ವರ್ಗಂ" ಎಂಬ ಹಿಂದು-ವಿಚಾರವನ್ನು ಜೈನರು ಒಪ್ಪುವುದಿಲ್ಲ.]

ಗೊಂಡು ಸಕಲಭೂಷಣ ಕೇವಲಿ ಭಟ್ಟಾರಕರ ಸಭೆಯನ್ನು ಸೇರಿ ಸದ್ಗತಿಯನ್ನೈದಿದಳು. ( ೧೬. ೩೩. )

(೫) **ನಾರದ—** ನಾರದನು ರಾಮಾಯಣದಲ್ಲಿ ಮುಖ್ಯ ವ್ಯಕ್ತಿಯಲ್ಲವಾದರೂ ಹಿಂದುಗಳ ನಾರದನಿಗಿಂತ ಜೈನ ನಾರದನು ಸ್ವಲ್ಪ ವಿಲಕ್ಷಣನಾದುದರಿಂದ ಆತನ ವಿಷಯವಾಗಿ ಹೇಳಬೇಕಾಯಿತು. ನಾರದನು ಒಬ್ಬನಲ್ಲ; ಒಂಬಯ್ವರು. ಒಬ್ಬೊಬ್ಬ ನಾರಾಯಣನ ಕಾಲದಲ್ಲಿ ಒಬ್ಬೊಬ್ಬನಂತೆ ಆಗಿರುವರು. ಇವರು ಕರ್ಮಫಲಭೋಗಕ್ಕಾಗಿ ನರಕಕ್ಕಿಳಿವರು. ರಾಮಚಂದ್ರನ ಕಾಲದ ನಾರದನು, ಸೀತೆಯನ್ನು ರಾಮನಿಗೆ ಕೊಟ್ಟ ಸುದ್ದಿಯನ್ನು ಕೇಳಿ ಆಕೆಯನ್ನು ಕಣ್ಣಾರೆ ನೋಡಬೇಕೆಂಬಾಸೆಯಿಂದ ಮಿಥಿಲೆಗೆ ಹೋಗಿ ನೇತ್ರೇಂದ್ರಿಯ ಲೋಭದಿಂದ ಸೀತೆಯ ಬಳಿಗೆ ಹೋಗಿ ಅಲ್ಲಿ ಆತನು ಪಡೆದ ದುರ್ದಶೆಯು ಕೇವಲ ಕರುಣಾಜನಕವಾಗಿದೆ. "ನಾರದನೇಂ ತಳೆದನೊ ಕನ್ಯಾರತ್ನಮನೆಳಸಿ ಪರಿವಪರಿಣತಿಯಿಂ ನಿ। ಸ್ಸಾರಮನಂ ಸೀಲಶಲಾ। ಕಾರತ್ನಮನೆಳಸಿ ಪರಿವತೃಣಪರಿಣತಿಯಂ॥" (೪. ೮೪.) ಎಂದು ಕವಿ ಹೇಳಿದಂತೆ ಆತನು ಕನ್ಯಾರತ್ನವನ್ನು 'ಎಳಸಿ' (ಬಯಸಿ) ಭ್ರಾಮಕನತ್ತೆಳಸುವ ಪಚ್ಚೆಗರ್ಬನದಂತೆ ಸೀತೆಯ ಬಟಿಪಳಿಯಿಂ ಪತ್ತಿ ನಡೆದನಂತೆ. ಎಂದಬಳಿಕ ಆತನಿಗೆ ಒದಗಿದ ದುರ್ದಶೆಯು ಯೋಗ್ಯವೆಂದೇ ಹೇಳಬೇಕಾಗುವುದು. ಆದರೆ ಮತ್ತೆ "ನೇತ್ರೇಂದ್ರಿಯ ಲೋಭದಿಂದ" (೪. ೪೫.) ತೊಂದರೆಪಟ್ಟನೆಂದು ಮುಂದಿನ ಪದ್ಯದಲ್ಲಿ ಹೇಳಿದುದನ್ನು ನೋಡಿದರೆ ಆತನು ಪಾಪವಿಚಾರವಿಲ್ಲದೆ ಕೇವಲ ಕೌತುಕಕ್ಕಾಗಿ—ಸೀತೆಯನ್ನು ನೋಡುವುದಕ್ಕಷ್ಟೇ—ಹೋಗಿದ್ದ ನೆಂದು ತಿಳಿಯುವುದು. ಏನೇ ಇರಲಿ, ಅಲ್ಲಿ ಪಟ್ಟಕಷ್ಟವೇನೋ ಹೆಚ್ಚಿನದು: ಸೀತೆಯು ತನ್ನ ಹತ್ತಿರಕ್ಕೆ ಬಂದ ನಾರದನ ಬೋಳ ಮಂಡೆ ಮುಂತಾದ ವಿಕೃತಾಕಾರವನ್ನು ಕಂಡು ಅಂಜಿ ಓಡಿದಳು.

ಈತನು ಆಕೆಯ ಬೆನ್ನಹತ್ತಿ ಓಡಿದನು. ದಾಸಿಯರು ಈತನನ್ನು ಹಿಡಿದು ಸಿಲ್ಲಿಸಿ ಅವಮಾನಗೊಳಿಸಿದರು. ಆಗ ಅರಮನೆಯ ಸೇವಕರೂ ಆಯುಧಪಾಣಿಗಳಾಗಿ ಬರಲು ನಾರದನು-ಪಿಂದಂ ಬೆಂದಗುಳ್ಪ್ಪರೆಂದು ಪೆಱಗಂ ನೋಡುತ್ತುಮೋಡುತ್ತುಮೆುಯ್ತ್ತಂದಂ ಗಾಳಿಗೆಱಂಕೆ ಮೂಡಿಪವೊಲ್" (೪. ೮೭.) ಹೀಗೆ ಹಾರುಗಾಲಿನಿಂದ ಓಡಿಹೋಗುವನು. ಆತನ ಮನಸ್ಸು ಕಾಮವಿಕಾರದಿಂದ ಕಲುಷಿತವಾದುದೆಂಬುದನ್ನು ನಾವು ಒಪ್ಪದಿದ್ದರೂ ಆತನ ಮನಸ್ಸು ದ್ವೇಷಾದಿಗಳಿಂದ ಕಲುಷಿತವಾದುದೆಂದು ಒಪ್ಪಬೇಕಾಗುವುದು. ಏಕೆಂದರೆ, ಆತನು ಮುಂದೆ ತನ್ನ ಈ ಅಪಮಾನಕ್ಕೆ ಕಾರಣವಾದ ಸೀತೆಗೆ ಪ್ರತಿಹಿಂಸೆ ಮಾಡುವುದಕ್ಕೆ ಪ್ರಯತ್ನಿಸಿದುದು ಈ ಮಾತನ್ನು ವ್ಯಕ್ತಪಡಿಸುವುದು. ಇದಲ್ಲದೆ ಈತನ ವಿಷಯವಾಗಿ ಹಿಂಸಾನಂದ (ಪರರನ್ನು ಪೀಡಿಸಿ ಆನಂದಬಡುವವ) ಎಂದೂ ಕಲಹಪ್ರಿಯ ("ಆವ ಕಾಳೆಗಮೊಳಂ ಕಣ್ಣಾರದಂ ನಾರದಂ") ಎಂದೂ ಈ ಪುರಾಣದಲ್ಲಿ ಅಲ್ಲಲ್ಲಿ ಉಲ್ಲೇಖಗಳು ಬಂದಿವೆ. ಆದರೂ ನಾರದನು "ಶುದ್ಧ ಪೋಕರಿ" ಅಲ್ಲ; ಆತನು ಲೋಕೋಪಕಾರಿ; ತ್ರಿಲೋಕಸಂಚಾರಿ. ರಾಮನು ವನವಾಸದಿಂದ ಇನ್ನೂ ಬಾರದಿರಲು ಆತನ ತಾಯಿ ಅಪರಾಜಿತಾದೇವಿಯು ದುಃಖದಲ್ಲಿರುವುದನ್ನು ನೋಡಿ—"ನಿಮಗಿನಿತು ಶೋಕಮೇಕಾ। ಯ್ತೆನುಗನಿತುಮನಱಿಯೆ ಪೇೞಿಮೆನೆ ನಾರದ ದಿ। ವ್ಯಮುನೀಶ್ವರಂ........" (೧೫. ೧೪.) ಆಕೆಯ ದುಃಖದಲ್ಲಿ ಪಾಲುಗಾರನಾಗುವನು. ಆತನು "ದಿವ್ಯಮುನೀಶ್ವರ"ನು. ಅಪರಾಜಿತಾದೇವಿಯ ದುಃಖವನ್ನು ತಿಳುಹುವುದಕ್ಕಾಗಿ ಆತನು ರಾಮನ ಬಳಿಗೆ ಬರಲು "ನಾರದನಪ್ಪುದನಱಿದು ಬೇಗಮಿದಿರೆೞ್ದು ಮಣಿಮಯಾಸನದೊಳಿರಿಸಿ ಕನಕಪಾತ್ರದೊಳ್ ಅರ್ಘ್ಯಮಂ ಕೊಟ್ಟು (೧೫ ೧೫.) ಇಷ್ಟುಮಟ್ಟಿಗೆ ರಾಮಚಂದ್ರನು ಸತ್ಕರಿಸುವಷ್ಟು ಗೌರವವುಳ್ಳವನಾಗಿರುವನು.

(೬) **ಹನುಮಂತ**— ಇವನು ರಾವಣನಂತೆ ಖಚರ ವಂಶದವನು. ಹನುಮರ ದ್ವೀಪವಾಸಿ. ಈತನು ವಾನರಧ್ವಜ (ಧ್ವಜದಲ್ಲಿ ವಾನರ ಚಿಹ್ನವುಳ್ಳವ) ನೂ, ವಾನರ ವಿದ್ಯೆಯುಳ್ಳರಿತವನೂ, ವಾನರ ರೂಪವನ್ನು ಧರಿಸಬಲ್ಲವನೂ ಆಗಿದ್ದನೇ ಹೊರತು ವಾನರನಲ್ಲ. ಹನುಮಂತನು ಗೃಹಸ್ಥಾಶ್ರಮಿ; ಬಾಲಬ್ರಹ್ಮಚಾರಿಯಲ್ಲ. ಆತನು ಸುಗ್ರೀವನ ಮಗಳಾದ ಪದ್ಮರಾಗೆಯನ್ನೂ ರಾವಣನ ತಂಗಿ ಚಂದ್ರನಖಿಯ ಮಗಳಾದ ಅನಂಗಪುಷ್ಪೆಯನ್ನೂ ಮದುವೆಯಾಗಿದ್ದನು. ಆತನ ಅಂತಃಪುರದಲ್ಲಿ ಸಹಸ್ರ ಜನ ಸ್ತ್ರೀಯರಿದ್ದರು. ತನಗೂ ಸಾಧ್ಯವಲ್ಲದ ‡ ಮಾಯಾ ಸುಗ್ರೀವನನ್ನು ರಾಮಲಕ್ಷ್ಮಣರು ಕೊಂದು ಕಪಿಧ್ವಜಕುಲಕ್ಕೆ ಉಪಕಾರ ಮಾಡಿದುದರಿಂದ ತಾನು ರಾಮನಿಗೆ ಸೇವಕನಾಗಿರುವೆನೆಂದು ನಿರ್ಧರಿಸಿ ಆತನಿಗೆ ಅಂಕಿತನಾಗಿದ್ದನು. ರಾಮನು ತನ್ನ ಉಪಾಸ್ಯ ದೇವತೆ, ಇಲ್ಲವೆ ಪರಮಾತ್ಮನು ಎಂದು ಆತನ ಭಕ್ತನಾಗಿರಲಿಲ್ಲ. ರಾಮನ ಸೇವೆಯನ್ನು ಮನವಿಟ್ಟು ಮಾಡಿದನು. ಗಗನ ಮಾರ್ಗದಿಂದ ಲಂಕೆಗೆ ಹೋಗಿ ಸೀತೆಯ ವರ್ತಮಾನವನ್ನು ತಂದನು. ತನ್ನ ದಹನ ವಿದ್ಯೆಯಿಂದ ಲಂಕೆಯನ್ನು ಸುಟ್ಟನು. ರಾಮರಾವಣ-ಯುದ್ಧದಲ್ಲಿಯೂ ಬಹಳ ಮಹತ್ವದ ಕೆಲಸಗಳನ್ನು ಮಾಡಿದನು. ಕೊನೆಗೆ ಹನುಮಂತನು "ಒಂದು ದಿವಸ ಇರುಳು ಮಣಿಮಾಡದೊಳು ಇದ್ದು ಗಗನದಿಂ ಬೀಳುವ ಉಲ್ಕವನು ಕಂಡು ಸಂಸಾರಿಗಳ ಜೀವನವು ಅಧ್ರುವವೆಂದು ಬಗೆದು ನಿರ್ವೇಗದಿಂದ ಸುಶ್ರುತನೆಂಬ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ಧರ್ಮಾಭರಣ

‡ ಒಬ್ಬ ಮೋಸಗಾರನು ಸುಗ್ರೀವನ ಆಕಾರವನ್ನು ಧರಿಸಿ ಆತನ ಮನೆಯನ್ನು ಸೇರಿ ಆತನನ್ನು ಹೊಡೆದೋಡಿಸಿ ಅಲ್ಲಿಯೇ ವಾಸ ಮಾಡಿದನು. ಆತನ ಮಗ ಅಂಗದನೂ ಭ್ರಮೆಗೊಂಡು ಈ ಕಪಟ ಸುಗ್ರೀವನನ್ನೇ ತಂದೆಯೆಂದು ಮನೆಯಲ್ಲಿರಿಸಿಕೊಂಡನು.

ರೆಂಬ ಚಾರಣಮುನಿಗಳ ಬಳಿಯಲ್ಲಿ ದೀಕ್ಷೆಯನ್ನು ಕೊಂಡನು. ಬಳಿಕ ಹನುಮ ಮುನಿಯು ಘಾತಿ, ಅಘಾತಿ ರೂಪವಾದ ಸಮಸ್ತ ಕರ್ಮಗಳನ್ನು ನಾಶಗೊಳಿಸಿ ನಿರ್ವಾಣವಂ ಪಡೆದನು." ಹನುಮಂತನು ನಿಯತಕಾಲ ಜೀವಿಯಲ್ಲದೆ ಚಿರಂಜೀವಿಯಲ್ಲ.

**ಬೇರೆ ಕೆಲವು ವ್ಯಕ್ತಿಗಳು**– ಹನುಮಂತನಂತೆ **ವಾಲಿ ಸುಗ್ರೀವರೂ** ಕಪಿಧ್ವಜರಾದ ಖಚರರು; ಕಪಿಗಳಲ್ಲ. ಜಿನಾಗಮ ಕೋವಿದನಾದ **ವಾಲಿಯು** ಜೈನಮುನಿಗಲ್ಲದೆ ಅನ್ಯರಿಗೆ ಕೈಮುಗಿಯದವನು. ರಾವಣನಿಗೆ ತನ್ನ ತಂಗಿಯನ್ನು ಮದುವೆ ಮಾಡಿಕೊಡಬೇಕಾದ ಸಂದರ್ಭವೊದಗಲು, ವಾಲಿಯು ಹಾಗೆ ಮಾಡಿದರೆ ತಾನು ರಾವಣನಿಗೆ ನಮಸ್ಕಾರ ಮಾಡಬೇಕಾಗುವುದೆಂದು ಸಂಸಾರವನ್ನೇ ತೊರೆದು ಕೈಲಾಸಗಿರಿಗೆ ತಪಶ್ಚರಣೆಗೆ ಹೋದನು. ಒಮ್ಮೆ ರಾವಣನ ವಿಮಾನವು ಕೈಲಾಸಗಿರಿಯ ಮೇಲಿಂದ ಹಾಯ್ದು ಬರುವಾಗ ವಾಲಿ ಭಟ್ಟಾರಕರ ಪ್ರಭಾವದಿಂದ ತಡೆದು ನಿಲ್ಲಲು ರಾವಣನು ತನ್ನ ಕೈಗಳಿಂದ ಆ ಗಿರಿಯನ್ನೇ ಕೀಳಲುಪಕ್ರಮಿಸಿದನೆಂದೂ, ಆಗ ವಾಲಿ ಭಟ್ಟಾರಕನು ಅಂಗುಷ್ಠದಿಂದ ಗಿರಿಯನ್ನು ಕೆಳಗೆ ಒತ್ತಲು ತಳದಲ್ಲಿ ಕೈ ಸಿಕ್ಕಿದ ರಾವಣನು ಅರಚಿದನೆಂದೂ, ಅಂದಿನಿಂದ ರಾವಣನೆಂಬ ಹೆಸರು † ರೂಢವಾಯಿತೆಂದೂ ಹೇಳಿದೆ. ವಾಲಿ ಭಟ್ಟಾರಕನು

---

† ಇಲ್ಲಿ ವಿಚಾರಣೀಯ ವಿಷಯಗಳು:—

ಹನುಮಂತ, ಸುಗ್ರೀವ, ವಾಲಿ ಮೊದಲಾದವರು ವಾನರರೆಂದೂ ಅವರಿಗೆ ಬಾಲವಿತ್ತೆಂದೂ ಹಿಂದು ಪುರಾಣಗಳು ಹೇಳುವುವು. ಪ್ರಾಕ್ತನ ವಿಮರ್ಶಕರು–ಹನುಮಂತ ಮೊದಲಾದವರು ಭರತಖಂಡದ ಮೂಲನಿವಾಸಿಗಳಾದ ಅನಾರ್ಯರ ವಂಶದವರೆಂದು ಹೇಳುವರು. ಜೈನರು ಹನುಮಂತ ಮೊದಲಾದವರು ವಿದ್ಯಾಧರ ವಂಶದ ಆರ್ಯ ಜನಾಂಗದವರೆಂದು ಹೇಳುವರು. ರಾವಣ ಮೊದಲಾದ ರಾಕ್ಷಸರ ವಿಷಯವಾಗಿಯೂ ಈ ತರದ ಮೂರು ಅಭಿಪ್ರಾಯಗಳಿರುವುವು. ಜೈನ ಮತದಲ್ಲಿ ರಾವಣನು ವಿದ್ಯಾಧರ ( ಖಚರ ) ವಂಶದ ಆರ್ಯ ಜನಾಂಗದವನು.

ಶುಕ್ಲಧ್ಯಾನದಿಂದ ಮುಕ್ತಿಯನ್ನು ಪಡೆದನು. **ಜಾಂಬವಂತನೂ** **ಋಕ್ಷ** ( ಕರಡಿ ) ಕುಲದವನಲ್ಲ; ಖಚರನು. ಜಿನಾಗಮ ಕೋವಿದನು. **ಭರತನು** ಸಾಮಾನ್ಯನು. ರಾಮಲಕ್ಷ್ಮಣರಲ್ಲಿ ಪರಸ್ಪರವಾಗಿ ಇರುವಷ್ಟು ಬಂಧು ಪ್ರೇಮವು ಈತನಲ್ಲಿರಲಿಲ್ಲ. ರಾಮಲಕ್ಷ್ಮಣರಿಗೆ ಮದುವೆಯಾದುದನ್ನೂ, ರಾಮನಿಗೆ ಪಟ್ಟಾಭಿಷೇಕವಾಗುವುದನ್ನೂ ಕಂಡು— ಸಿರಿಯುಂ ಮೈಮೆಯುಮಾದುವಗ್ರಜರೊಳಾಯಿತ್ತಲ್ಲೆನ್ನೊಳೆಂಬೀವದಿಂ। ಭರತಂ ಲೋಭರತಂ ವಿಷಾದ ಭರತಂದ್ರೀ ಭೂತ ಚಿತ್ತಂ ತಪೋಭರತತ್ಪ್ರಷ್ಣಾಪರನಪ್ಪುದಂ........... ( ೬. ೨. ) ಹೀಗೆ ಮತ್ಸರಬಡುವಷ್ಟು ಅನುದಾತ್ತನು. ಆದರೂ ಆತನು ವಿರಕ್ತನು. ರಾಮನಿಗೆ ಮರಳಿ ರಾಜ್ಯವನ್ನೊಪ್ಪಿಸಿದ ಒಳಿಕ ತೊರೆದು ದೀಕ್ಷೆ ಪಡೆಯುವನು.

## ಜೈನರಾಮಾಯಣವೂ ವೈದಿಕರಾಮಾಯಣವೂ—

ವಾಲ್ಮೀಕಿಯು ಈ ಪುರಾಣದಲ್ಲಿ ಬರುವುದಿಲ್ಲ. ವಿಮಲಾಚಾರ್ಯನೂ ರವಿಷೇಣಾಚಾರ್ಯನೂ ಜೈನರಾಮಾಯಣವನ್ನು ಬರೆದರು. ವೈಕುಂಠದ್ವಾರಪಾಲಕರಾದ ಜಯವಿಜಯರು ದೇವ ಋಷಿಗಳ ಶಾಪದಿಂದ ಮೂರು ಜನ್ಮಗಳಲ್ಲಿ [(೧) ಹಿರಣ್ಯಾಕ್ಷ ಹಿರಣ್ಯಕಶಿಪು, (೨) ರಾವಣ, ಕುಂಭಕರ್ಣ (೩) ಶಿಶುಪಾಲ, ದಂತವಕ್ರ] ದೈತ್ಯರಾಗಿ ಪರಮಾತ್ಮದ್ವೇಷಮಾಡಿ ನೃಸಿಂಹ, ರಾಮ, ಕೃಷ್ಣರಿಂದ ಹತರಾಗಿ ಮರಳಿ ತಮ್ಮ ಸ್ಥಾನವನ್ನು ಪಡೆದರೆಂದು ಹಿಂದು ರಾಮಾಯಣವು ಹೇಳುವುದು. ನಾರಾಯಣ ದ್ವೇಷಿಗಳಾದ ಪ್ರತಿನಾರಾಯಣರು ಒಂಬಯ್ವರೆಂದೂ ಅವರು ಕಾಲಕಾಲಕ್ಕೆ ಉದಯಿಸಿದ ನಾರಾಯಣರಿಂದ ಹತರಾಗುವರೆಂದೂ ಇಲ್ಲಿ ಹೇಳಿದೆ. ದೇವದೈತ್ಯ ಯುದ್ಧದಲ್ಲಿ ದೇವಪಕ್ಷ ಸಹಾಯಕ್ಕೆ ಹೋದ ದಶರಥನಿಗೆ ಯುದ್ಧದಲ್ಲಿ ಸಹಾಯಮಾಡಿದುದರಿಂದ ಕೈಕೇಯಿಯು ದಶರಥನಿಂದ ವರ

ಗಳನ್ನು ಪಡೆದಳೆಂದು ಅಲ್ಲಿ ಹೇಳಿದೆ. (ದೈತ್ಯರು ಇಲ್ಲದುದರಿಂದ) ಕೈಕೇಯಿಯ ಸ್ವಯಂವರದಲ್ಲಿ ಆಕೆಯನ್ನು ಪಡೆಯದೆ ಕೋಪಗೊಂಡು ಯುದ್ಧಕ್ಕೆ ನಿಂತ ರಾಜಕುಮಾರರೊಡನೆ ದಶರಥನು ಮಾಡಿದ ಯುದ್ಧದಲ್ಲಿ ಸಹಾಯಮಾಡಿದುದರಿಂದ ಕೈಕೆ ವರವನ್ನು ಪಡೆದಳೆಂದು ಇಲ್ಲಿ ಹೇಳಿದೆ. ದಶರಥನು ಮಕ್ಕಳಿಗಾಗಿ ಪುತ್ರಕಾಮೇಷ್ಟಿಯನ್ನು ಮಾಡಿದನೆಂದು ಅಲ್ಲಿ ಹೇಳಿದೆ. [ಪುತ್ರಕಾಮೇಷ್ಟಿಯಲ್ಲಿ ಪಶುಹಿಂಸೆ ಬರುವುದೋ ಏನೋ?] ದಶರಥನಿಗೆ ಸಕಾಲದಲ್ಲಿ ಎಲ್ಲರಿಗೂ ಮಕ್ಕಳು ಹುಟ್ಟುವಂತೆ ಮಕ್ಕಳು ಹುಟ್ಟಿದರೆಂದು ಇಲ್ಲಿ ಹೇಳಿದೆ. ಸೀತೆ ಅಯೋನಿಜೆ; ಜನಕನು ಯಜ್ಞಭೂಮಿಯ ಶೋಧನೆ ಮಾಡುವಾಗ ಸೀತೆ ದೊರೆತಳೆಂದು ಅಲ್ಲಿ ಹೇಳಿದೆ. [ಯಜ್ಞಗಳಿಗೆ ಪ್ರಾಶಸ್ತ್ಯವಿಲ್ಲದುದರಿಂದಲೋ?] ಸೀತೆ ಜನಕನ ಮಡದಿಯಾದ ವಿದೇಹಿಯ ಗರ್ಭದಲ್ಲಿ ಜನಿಸಿದಳೆಂದು ಇಲ್ಲಿ ಹೇಳಿದೆ. ಅಲ್ಲಿ ವಿಶ್ವಾಮಿತ್ರನ ಯಜ್ಞರಕ್ಷಣೆಗಾಗಿ ರಾಮಲಕ್ಷ್ಮಣರು ಬಾಲ್ಯದಲ್ಲಿ ಆತನ ಆಶ್ರಮಕ್ಕೆ ಹೋಗುವರು. ಇಲ್ಲಿ ಯಜ್ಞಕರ್ತೃವಾದ ವಿಶ್ವಾಮಿತ್ರನ ಉಲ್ಲೇಖವಿಲ್ಲ; ಜನಕರಾಜನ ರಾಜ್ಯಕ್ಕೆ ಪೀಡೆಯನ್ನುಂಟುಮಾಡಿದ ಬೇಡರ ಶಾಸನಕ್ಕಾಗಿ ರಾಮಲಕ್ಷ್ಮಣರು ಬಾಲ್ಯದಲ್ಲಿ ಜನಕನ ರಾಜ್ಯಕ್ಕೆ ಹೋಗುವರು. ಸೀತಾಸ್ವಯಂವರದಲ್ಲಿ ರಾಮನು ತ್ರಿಮೂರ್ತಿಗಳಲ್ಲೊಬ್ಬನಾದ ಶಿವನ ಬಿಲ್ಲನ್ನು ಮುರಿದನೆಂದು ಅಲ್ಲಿ ಹೇಳಿದೆ. ತ್ರಿಮೂರ್ತಿಗಳ ಪ್ರಾಶಸ್ತ್ಯವಿಲ್ಲದ ಇಲ್ಲಿ ರಾಮಲಕ್ಷ್ಮಣರು ಖಚರರ ಬಿಲ್ಲನ್ನು ಮುರಿದರೆಂದಿದೆ. ರಾಮನ ವನವಾಸಕ್ಕೆ ದೇವಪ್ರೇರಿತ ಮಂಥರಾದಾಸಿಯು ಕೈಕೇಯಿಗೆ ದುರುಪದೇಶ ಮಾಡಿದುದು ಅಲ್ಲಿ ಕಾರಣವಾಗಿದೆ. (ಭೂಲೋಕ ಕಲ್ಯಾಣಕ್ಕೆ ಹೆಣಗುವ ದೇವತೆಗಳು* ಇಲ್ಲವಾದುದರಿಂದ) ರಾಮಲಕ್ಷ್ಮಣರ ಏಳಿಗೆಗೆ ಭರತ

---

**ಜೈನಮತದಲ್ಲಿ ದೇವತೆಗಳಲ್ಲಿ ನಾಲ್ಕು ವರ್ಗಗಳು. ೧. ಊರ್ಧ್ವಲೋಕ**

ನಲ್ಲಿ ಉಂಟಾದ ಮತ್ಸರವು ಇಲ್ಲಿ ರಾಮನ ವನವಾಸಕ್ಕೆ ಕಾರಣವಾಗಿದೆ. ಅಲ್ಲಿ ಕೈಲಾಸದ ತಳಕ್ಕೆ ಕೈಹಾಕಿದ ರಾವಣನು ಶಿವನ ಅಂಗುಷ್ಠಾಘಾತಕ್ಕೆ ಅರಚುವನು. ಇಲ್ಲಿ ವಾಲಿಭಟ್ಟಾರಕನ ಅಂಗುಷ್ಠಾಘಾತಕ್ಕೆ ಅರಚುವನು. ಸೀತಾವಿವಾಹವನ್ನು ಮಾಡಿಕೊಂಡು ಅಯೋಧ್ಯೆಗೆ ಹೊರಟ ರಾಮನನ್ನು ವಿಷ್ಣುವಿನ ಆರನೆಯ ಅವತಾರವೆನಿಸಿದ ಪರಶುರಾಮನೆಂಬ ಬ್ರಾಹ್ಮಣನು ಅಲ್ಲಿ ತಡೆಯುವನು. ಖಚರರಾಜನಿಂದ ಸಲಹಲ್ಪಟ್ಟ ಪ್ರಭಾಮಂಡಲನೆಂಬವನು ಸೀತೆ ತನ್ನ ತಂಗಿಯೆಂಬುದನ್ನರಿಯದೆ ತನಗೆ ಆಕೆ ದೊರಕದಿರುವುದರಿಂದ ರಾಮನನ್ನು ತಡೆಯುವುದಕ್ಕೆ ಹೋದನೆಂದು ಇಲ್ಲಿ ಹೇಳಿದೆ. ವಾಯುಸುತನಾದ ಹನುಮಂತನು ಸಮುದ್ರೋಲ್ಲಂಘನ ಮಾಡಿದುದು ಒಂದು ಅದ್ಭುತಕಾರ್ಯವೆಂದು ಅಲ್ಲಿ ವರ್ಣಿತವಾಗಿದೆ. ಖಚರನಾದ ಹನುಮಂತನು ವಿಮಾನದಿಂದ ಲಂಕೆಗೆ ಹೋಗುವುದು ಸಹಜಕಾರ್ಯವೆಂದು ಇಲ್ಲಿ ವರ್ಣಿತವಾಗಿದೆ. ಭೂಚರವಾದ ವಾನರಸೇನೆಯು ಲಂಕೆಗೆ ಹೋಗುವುದಕ್ಕೆ ಅಲ್ಲಿ ಸೇತು ಬೇಕಾಯಿತು; ಇಲ್ಲಿ ನಭೋಗಮನವಿದ್ಯೆಯೇ ಸೇತುವಾಯಿತು. ಅಲ್ಲಿ ರಾಮನಿಂದ ಪರಿತ್ಯಕ್ತೆಯಾದ ಸೀತೆ ವಾಲ್ಮೀಕಿಯ ಆಶ್ರಮದಲ್ಲಿ ಆಶ್ರಯವನ್ನು ಹೊಂದುವಳು; ಇಲ್ಲಿ ವಜ್ರಜಂಘನೆಂಬ ಧಾರ್ಮಿಕ ರಾಜನ ಆಶ್ರಯವನ್ನು ಹೊಂದುವಳು. ಅಲ್ಲಿ ರಾಮಚಂದ್ರನು ಅಶ್ವಮೇಧವನ್ನು ಮಾಡುವನು. ಯಜ್ಞಾಶ್ವಬಂಧನ ನಿಮಿತ್ತದಿಂದ ಲವಕುಶರಿಗೂ ರಾಮನಿಗೂ ಯುದ್ಧವಾಗುವುದು;

---

ವಾಸಿಗಳಾದ ವೈಮಾನಿಕರು, ೨. ಸೂರ್ಯನಕ್ಷತ್ರಾದಿಗಳಲ್ಲಿ ವಾಸಿಸುವ ಜ್ಯೋತಿಷ್ಕರು, ೩. ಗಿರಿಗುಹಾವೃಕ್ಷಾದಿಗಳಲ್ಲಿ ವಾಸಿಸುವ ಕಿನ್ನರ ಗಂಧರ್ವಾದಿಗಳು. ೪. ಅಧೋಲೋಕವಾಸಿಗಳಾದ ಅಸುರ, ನಾಗ, ಅಗ್ನಿಕುಮಾರ ಮೊದಲಾದ ಭವನವಾಸಿಗಳು.

ಅಸುರಕುಮಾರ ಎಂಬ ದೇವತೆಗಳು ನಾರಕಜೀವರಿಗೆ ಪೀಡೆಕೊಟ್ಟು ಆನಂದಬಡುವರು !

ವಾಲ್ಮೀಕಿಯು ಲವಕುಶರ ಪರಿಚಯ ಮಾಡಿಕೊಡುವನು. ಅಹಿಂಸಾ ಪರಮೋಧರ್ಮಃ ಎಂದು ಹೇಳುವ ಇಲ್ಲಿ ಅಶ್ವಮೇಧವಿಲ್ಲ. ನಾರದನು ಲವಕುಶರಿಗೂ ರಾಮಚಂದ್ರನಿಗೂ ಯುದ್ಧವಾಗುವಂತೆ ಮಾಡಿ ಕೊನೆಗೆ ತಾನೇ ಲವಕುಶರ ಪರಿಚಯಮಾಡಿಕೊಡುವನು. ಅಲ್ಲಿ ದಶರಥನು, ರಾಮನು ವನವಾಸಕ್ಕೆ ತೆರಳಿದ ಕೂಡಲೆ ಅಸಹ್ಯ ಪುತ್ರ ವಿಯೋಗದುಃಖದಿಂದ ಮರಣಹೊಂದಿದನೆಂದಿದೆ. ಇಲ್ಲಿ ದಶರಥನು ಭರತನಿಗೆ ಪಟ್ಟಾಭಿಷೇಕ ಮಾಡಿ, ತೊರೆದು ದೀಕ್ಷೆ ಹೊಂದಿ ಮೋಕ್ಷ ಸಾಧನೆ ಮಾಡಿದನೆಂದಿದೆ. ಒಂದು ಅಪರಾಧಕ್ಕಾಗಿ ರಾಮನು ಲಕ್ಷ್ಮಣನನ್ನು ತ್ಯಾಗಮಾಡಿದಂತೆಯೂ, ಲಕ್ಷ್ಮಣನು ಮನೆಯಿಂದ ಸರಯೂತೀರಕ್ಕೆ ಹೋಗಿ ಯೋಗಾಸಕ್ತನಾಗಿ ದೇವೇಂದ್ರನಿಂದ ಆಹೂತನಾಗಿ ಸ್ವರ್ಗಕ್ಕೆ ತೆರಳಿದಂತೆಯೂ ಅಲ್ಲಿ ಹೇಳಿದೆ. ಇಲ್ಲಿ ರಾಮ ಲಕ್ಷ್ಮಣರ ಪರಸ್ಪರ ಪ್ರೇಮಾತಿರೇಕವನ್ನು ಪರೀಕ್ಷಿಸಲೋಸುಗ ಬಂದ ಇಬ್ಬರು ದೇವತೆಗಳು ಮಾಯೆಯಿಂದ ರಾಮಚಂದ್ರನು ಮೃತನಾದಂತೆ ತೋರಿಸಲು ಲಕ್ಷ್ಮಣನು ಭ್ರಾತೃಶೋಕದಿಂದ ಪ್ರಾಣಬಿಟ್ಟನೆಂದು ಹೇಳಿದೆ. ರಾಮನು ತನ್ನ ಅವತಾರಕೃತ್ಯವನ್ನು ಮುಗಿಸಿ ಸರಯೂತೀರಕ್ಕೆ ಬಂದು ತನ್ನ ವಿಷ್ಣುಶರೀರವನ್ನು ಧರಿಸಿ, ಕರೆಯ ಬಂದ ಬ್ರಹ್ಮಾದಿಗಳೊಡನೆ ವೈಕುಂಠಕ್ಕೆ ತೆರಳಿದನೆಂದು ಅಲ್ಲಿ ಹೇಳಿದೆ. ರಾಮಚಂದ್ರನು ದೀಕ್ಷೆ ಹೊಂದಿ ಶುಕ್ಲಧ್ಯಾನಾದಿಗಳಿಂದ ಕರ್ಮಕ್ಷಯ ಮಾಡಿ, ಶಾಶ್ವತಮುಕ್ತಿಯನ್ನು ಪಡೆದನೆಂದು ಇಲ್ಲಿ ಹೇಳಿದೆ. ಲಂಕೆಯಲ್ಲಿ ನಡೆದ ಅಗ್ನಿಪರೀಕ್ಷೆಯಿಂದ ಸೀತೆ ವಿಶುದ್ಧೆಯೆಂದು ನಿರ್ಣಯವಾಗಿದ್ದರೂ ಮತ್ತೆ ವಿಶುದ್ಧತೆಯ ಪ್ರಮಾಣವನ್ನು ತೋರಿಸಬೇಕೆಂದು ಪ್ರಸ್ತಾವಿಸಲು ಸೀತೆ—ತಾಯಿ, ನಾನು ಪರಿಶುದ್ಧೆಯಾಗಿದ್ದರೆ ನಿನ್ನ ಹೊಟ್ಟೆಯಲ್ಲಿ ನನ್ನನ್ನು ಕರೆದುಕೊಳ್ಳು ಎಂದು ಭೂದೇವಿಯನ್ನು ಪ್ರಾರ್ಥಿಸಿದಂತೆಯೂ, ಆಗಲೇ ಇಬ್ಭಾಗವಾದ ಭೂಮಿ

ಯೊಳಗಿಂದ ಪ್ರಕಟವಾದ ದಿವ್ಯರಥದಲ್ಲಿ ಕುಳಿತುಕೊಂಡು ಸೀತೆಯು ಭೂಗರ್ಭದಲ್ಲಿ ಶಾಶ್ವತಶಾಂತಿಯನ್ನು ಪಡೆದಂತೆಯೂ ಅಲ್ಲಿ ಹೇಳಿದೆ. ಸೀತೆ ಅಗ್ನಿಪರೀಕ್ಷಾನಂತರದಲ್ಲಿ ನಿರ್ವೇಗಹೊಂದಿ ಆರ್ಯಿಕಾವ್ರತವನ್ನು ಸ್ವೀಕರಿಸಿ, ಉಗ್ರತಪಸ್ಸನ್ನಾಚರಿಸಿ ಅಚ್ಯುತ❖ ಸ್ವರ್ಗದ ಇಂದ್ರಪದವಿಯನ್ನು ಪಡೆದಳೆಂದು ಇಲ್ಲಿ ಹೇಳಿದೆ.

**ರಾಮಲಕ್ಷ್ಮಣರು ಮಾಡಿದ ಜೈನಧರ್ಮಾಭಿವೃದ್ಧಿಸಹಾಯ-**

ಶಲಾಕಾಪುರುಷರೂ, ಕುಲಂಕರರು, (ಮನುಗಳು) ಮೊದಲಾದವರೂ **ಕಾರಣಪುರುಷ**ರು. ಕಾರಣಪುರುಷರೆಂದರೆ ಮಹತ್ತ್ವದ ಲೋಕ ಕಲ್ಯಾಣಕಾರ್ಯಕ್ಕೆ ಕಾರಣವಾದವರೆಂದು ಅರ್ಥವು. ಪ್ರತಿವಾಸುದೇವರ ಅತ್ಯಾಚಾರಕ್ಕೆ ಪ್ರಪಂಚವು ಬೇಸರಲು ಬಲದೇವ ವಾಸುದೇವರು ಕಾಲಕಾಲಕ್ಕೆ ಉದಯಿಸಿ ಪ್ರತಿವಾಸುದೇವರನ್ನು ನಿಗ್ರಹಿಸುವರು. ಈ ಕಾರಣದಿಂದ ರಾಮಲಕ್ಷ್ಮಣರು ಕಾರಣಪುರುಷರು. ತೀರ್ಥಂಕರರಂತೆ ಇವರು ಧರ್ಮವೃದ್ಧಿಗೂ ಸಹಾಯ ಮಾಡುವರು. ವನವಾಸದಲ್ಲಿರುವಾಗ **ವಂಶಸ್ಥಲ**ವೆಂಬ ಗಿರಿಯ ತಪ್ಪಲಲ್ಲಿ ತಪಸ್ಸಿಗೆ ಕುಳಿತ **ದೇಶಭೂಷಣ**ರೆಂಬ ಮುನಿಗಳನ್ನು **ಅಗ್ನಿಪ್ರಭ**ನೆಂಬ ದೇವನು ವಿಷಮವಿಷೋರಗಗಳನ್ನೂ ವೃಶ್ಚಿಕಗಳನ್ನೂ ನಿರ್ಮಿಸಿ ಕಾಡುತ್ತಿರಲು ಲಕ್ಷ್ಮಣನು ಆ ದೇವನನ್ನು ಓಡಿಸಿದನು. **ಸಿಂಹೋದರ**ನೆಂಬ ಅರಸನ ಸಾಮಂತನಾದ **ವಜ್ರಕರ್ಣ**ನು ಸಕಲಜ್ಞಂ (ಜಿನಂ) ಪೆಱಗಾಗೆ ಕೈಮುಗಿಯೆನೆಂಬೀ ಪೂಣ್ಕೆಯಿಂ ರತ್ನಮುದ್ರಿಕೆಯೊಳ್ ಕೀಲಿಸಿ ಜೈನಬಿಂಬಮಂ (೭. ೩೪.) ಹೀಗೆ ವೀರಜಿನಭಕ್ತನಾಗಿ ಕೃತಕ ನಮಸ್ಕಾರ ಮಾಡುವನೆಂದು ಕೇಳಿ ಆತನ ಪುರವನ್ನು ಮುತ್ತಲು ಲಕ್ಷ್ಮಣನು ಸಿಂಹೋ

❖ ಸ್ವರ್ಗಗಳು ಹದಿನಾರು. ಅಚ್ಯುತವೆಂಬುದು ಎಲ್ಲಕ್ಕೂ ಹೆಚ್ಚಿನ ಸ್ವರ್ಗವು. ಪ್ರತಿಸ್ವರ್ಗಕ್ಕೂ ಇಂದ್ರನುಂಟು.

ವರನನ್ನು ದಂಡಿಸಿ—"ಅಪ್ರತಿಕಂಗೆವಿಗದ ಏ। ರಪ್ರತಮುಂ ಕೇಳ್ಳು ಪರ್ವಮಂ ತಾಳ್ದದ ಸಿನ್ನಬ್ರಹ್ಮಣ್ಯಂ ಮರ್ಯಜನ ವ್ರೀಡಾಕರಂ" (೭. ೫೧.) ಮೊದಲಾಗಿ ಆತನನ್ನು ಹಳಿಯುವನು. ರಾಮನಲ್ಲಿ ಹಿಂಸಾಪ್ರವೃತ್ತಿಯು ಯಾವಾಗಲೂ ಕಾಣಬರುವುದಿಲ್ಲ. ರಾಮನು ತನ್ನ ಆಚರಣೆಯಿಂದಲೇ ಲೋಕಕ್ಕೆ ಆದರ್ಶವಾಗಿರುವನು. ಆತನು ಪುನಃ ಕುಂದು ಬಾರದಂತೆ ಸಂಸಾರವನ್ನು ಮಾಡಿ ಕೊನೆಗೆ ಕಡುತರವಾದ ತಪಸ್ಸನ್ನೆಸಗಿ—

ಕಿಡೆ ನಿಶ್ಶೇಷಮುಘಾತಿ ಪಜ್ಜಳಿಸೆ ತನ್ನೆಂಟುಂ ಗುಣಂ ಕೂಡೆ ನೇ।
ರ್ಪಡೆ ದೀಪಾರ್ಚಿಗಳಂತಿರೂರ್ಧ್ವಗತಿ ಮುಂಬಿಂ ಲೋಕದಿಂ
ಮೇಲೆ ಬೆ।
ಳ್ಗೊಡೆಯಿರ್ಪಂತೆವೊಲಿರ್ದ ಸಿದ್ಧನಿಲಯಕ್ಕಾನಂದದಿಂ ಪೋಗಿ ಕೈ।
ಪಿಡಿದಂ ಶಾಶ್ವತಮಪ್ಪ ಮುಕ್ತಿವಧುವಂ ಶ್ರೀರಾಮಭಟ್ಟಾರಕಂ
(೧೬। ೮೨)

"ಪೂಮಯಿಕೆ ಕವಿಕೆದತ್ತಖಿಲ ದಿ। ಶಾಮುಖಂ ದೇವದುಂದುಭಿಧ್ವನಿ ತೀವಿತ್ತು" ಎಂಬಂತೆ ಸರ್ವಮಾನ್ಯನಾಗಿ, ಶಾಶ್ವತ ಪರಮಪದವನ್ನು ಪಡೆದುದು ಸಮಸ್ತ ಭವ್ಯರಿಗೆ ಪ್ರಶಂಸನೀಯವೂ ಸ್ಪೃಹಣೀಯವೂ ಆಗಿರುವುದು.

**ಜನತೆಯ ಮೇಲೆ ಜೈನ ರಾಮಾಯಣದ ಪ್ರಭಾವ:—** ವಾಲ್ಮೀಕಿಯ ಭರತನ ಬಂಧುಪ್ರೇಮವು ಲೋಕಕ್ಕೆ ಆದರ್ಶವಾಗಿರುವಂತೆ ಇಲ್ಲಿ ಲಕ್ಷ್ಮಣನ ಬಂಧುಪ್ರೇಮವು ಲೋಕಕ್ಕೆ ಆದರ್ಶವಾಗಿದೆ. ಅತ್ಯಂತ ವೈಭವಶಾಲಿಯೂ ಪರಾಕ್ರಮಿಯೂ ಸುಂದರನೂ ಸದ್ವಂಶಜನೂ ಆದ ರಾವಣನನ್ನು ಸೀತೆಯು ತೃಣೀಕರಿಸಿ ಪ್ರಕಟಿಸಿದ ಪಾತಿವ್ರತ್ಯವು ವಾಲ್ಮೀಕಿಯ ಸೀತೆಯ ಪಾತಿವ್ರತ್ಯಕ್ಕಿಂತ ಮಿಗಿಲಾಗಿ ಲೋಕಕ್ಕೆ ಉಜ್ವಲವಾದ ದೃಷ್ಟಾಂತವಾಗಿದೆ. ತಪಶ್ಚರಣೆ ಮಾಡು

ವಾಗ ೩೪ ದಿವಸ ಅನಶನವ್ರತಾನಂತರವಲ್ಲಿ ಕಾಂತಾರಭಿಕ್ಷೆಗೆ ಹೊರಟ ರಾಮಭಟ್ಟಾರಕನಿಗೆ ಅಲ್ಲಿಗೆ ಅಕಸ್ಮಾತ್ತಾಗಿ ಹೋಗಿದ್ದ ಪ್ರತಿನಂದಿ ಎಂಬ ರಾಜನು ದಿವ್ಯಾಹಾರವನ್ನು ಕೊಡಲು ಉಂಟಾದ...........

[ರೈವೃಷ್ಟಿ ಕುಸುಮ ವರ್ಷಂ। ದೇವರಹೋದಾನ ಘೋಷಣಂ ಹಿಮಪವನಂ॥ ದೇವಾನಕರವನೆಸವರೆ ಮ। ಹಾವಿಸ್ಮಯ ಹೇತುವಾಯ್ತು ಪಂಚಾಶ್ಚರ್ಯಂ॥] ಮಹಿಮೆಯನ್ನು ವರ್ಣಿಸಿರುವನು. ಇಂತಹ ವರ್ಣನೆಗಳು ಜನತೆಯ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡುವುವು. ಈಗಲೂ ಮುನಿಗಳು, ಯತಿಗಳು ಊರಿಗೆ ಬಂದಾಗ ಅವರು ತಮ್ಮ ಮನೆಗೆ ಬಂದು ಭಿಕ್ಷೆಯನ್ನು ಸ್ವೀಕರಿಸಬೇಕೆಂದು ಎಲ್ಲರೂ ಉತ್ತಮ-ಆಹಾರವನ್ನು ಸಿದ್ಧಪಡಿಸಿಕೊಂಡು ಅವರ ದಾರಿಯ ನಿರೀಕ್ಷಿಸುವುದೂ, ಅವರು ಬೇಕಾದ ಒಬ್ಬರ ಮನೆಗೆ ಹೋಗಿ ಆಹಾರವನ್ನು ಸ್ವೀಕರಿಸುವುದೂ ಜೈನರಲ್ಲಿ ವಾಡಿಕೆಯಾಗಿದೆ. ಯಕ್ಷಗ್ರಾಮದಲ್ಲಿರುವ ಸುರೂಪ, ಕರುಷ ಎಂಬ ಗೃಹಸ್ಥರು ಒಬ್ಬ ಬೇಡನು ಹಿಡಿದು ತಂದ ಹಕ್ಕಿಯನ್ನು ಬೆಲೆಗೊಟ್ಟು ಬಿಡಿಸಿದರೆಂದು ಇಲ್ಲಿ ವರ್ಣಿಸಿದೆ. ಇಂತಹ ಧರ್ಮಾಚರಣೆಯ ಪ್ರಭಾವವೂ ಜನರ ಮೇಲೆ ಚೆನ್ನಾಗಿ ಮೂಡಿದೆ. ವಧೆಗೆ ಹೋಗುವ ಪ್ರಾಣಿಗಳನ್ನು ರಕ್ಷಿಸುವುದು ಜೈನರಲ್ಲಿ ವಾಡಿಕೆಯಾಗಿದೆ. ಪರಿಗ್ರಹಬಹುತ್ವವು ಎಂದರೆ ಅನೇಕ ವಿಷಯಗಳ ಸಂಬಂಧವನ್ನಿಟ್ಟುಕೊಳ್ಳುವುದು ದೋಷವು. **ಅರ್ಥಸಂಗ್ರ**ಹವು ಈ ಪರಿಗ್ರಹಬಹುತ್ವದಲ್ಲಿ ಸೇರುವುದು. ಕುಟುಂಬದವರಿಗೆಂದು ದ್ರವ್ಯಸಂಗ್ರಹ ಮಾಡುವುದು ದೋಷವೆಂದು ಒಂದು ಪ್ರಸಂಗದಲ್ಲಿ ಕವಿಯು ಹೀಗೆ ಹೇಳಿರುವನು:—

ಪರಪೀಡಾಕರಮೆಂತು ನೋಡುವೊಡಮರ್ಥೋಪಾರ್ಜನಂ
ತದ್ದ್ವಾರಾ।
ಚರಿತೋದೀರಿತ ದುಃಖತಿಕ್ತಫಲಸೇವಾಕಾಲದಂದೊರ್ವರುಂ।

ನೆರವಿಲ್ಲಾ! ಧನಸೇವೆಯಿಂದೆ ನೆರವಪ್ಪರ್ ನಂಟರೆಂದಂದು ತಾಂ।
ಮರುಳಕ್ಕುಂ ಪುರುಳಕ್ಕುಮೇ ಮಱೆದು ಹಾನಾದಾನ
ವಿಜ್ಞಾನಮಂ॥ (೬. ೬೭.)

ಅನರ್ಥಗಳಿಗೆ ಕಾರಣವಾದ **ಕೋಪ**ವನ್ನು ಕವಿಯು ಹೀಗೆ ನಿರಾಕರಿಸುವನು:—

ಪೊಲೆ ಮುಳಿಸೆಂಬುದಾ ಮುಳಿಸು ಪುಟ್ಟಿದ ಪೊತ್ತಿನೊಳಾವ
ನಾದೊಡಂ।
ಪೊಲೆಯನೆ ಪಾಪಹೇತು ಮುಳಿಸಲ್ಲದೆ ಪೇೞ್ ಪೆಱತುಂಟೆ
ಕೋಪದಿಂ।
ಕೊಲೆ ದೊರೆಕೊಳ್ಗುಮಾಕೊಲೆಯೆ ಪಾತಕಮೆಂಬುದು ಪುಣ್ಯ
ಮೆಂಬುದಾ।
ಕೊಲೆ ಪೊಲೆ ಪೊರ್ದದಿರ್ಪರನೆ ನೀಮುದಿಪಿಂ ತೊಱೆಯಿಂ
ವಿರೋಧಮಂ॥ (೧೦. ೯೪.)

ಇದೇ ಮೇರೆಗೆ ಈ ಪುರಾಣವು **ಪರಾಂಗನಾವಿರತಿ** ಮೊದಲಾದ ಸುಶೀಲಗಳ ಮಹಿಮೆಯನ್ನು ವರ್ಣಿಸುವುದು; ಹಿಂಸಾದಿ ದುರಾಚಾರಗಳನ್ನು ಬಿಸುಟಿ ಸದಾಚಾರಗಳನ್ನು ಕೈಕೊಳ್ಳಬೇಕೆಂಬ ಭಾವನೆಯನ್ನುಂಟುಮಾಡುವುದು; ಎಲ್ಲೆಲ್ಲಿಯೂ ಅಣುವ್ರತ ಮೊದಲಾದ ಧರ್ಮಾಚರಣೆಯ ಪ್ರಭಾವವನ್ನು ವರ್ಣಿಸುವುದು. ಖಚರರು, ವಾನರರು ಮುಂತಾದ ಎಲ್ಲರೂ ಜಿನಭಕ್ತರು; ಜಟಾಯು ಎಂಬ ಹಕ್ಕಿ, ತ್ರಿಜಗದ್ಭೂಷಣ ಎಂಬ ಆನೆ ಮೊದಲಾದ ತಿರ್ಯಂಚಗಳೂ ಅಣುವ್ರತವನ್ನು ಹಿಡಿದು ಉಪಶಮ ಹೊಂದುವವು; ಎಲ್ಲಿ ನೋಡಿದರೂ ತಪಸ್ವಿಗಳು, ಚಾರಣಋಷಿಗಳು, ಭಟ್ಟಾರಕರು, ಕೇವಲ ಜ್ಞಾನಿಗಳು ಮೊದಲಾದವರ ಮಹಿಮೆಯನ್ನು ನಮ್ಮ ಕಣ್ಣಿಗೆ ಕಟ್ಟಿದಂತೆ ಮಾಡುವುದು; ಮತ್ತು ಇವೆಲ್ಲವುಗಳಿಂದ ಜೀವನು ಪರಿಶುದ

ನಾಗಿ, ಕ್ರಮದಿಂದ ನಿರ್ವೇಗವನ್ನು ಹೊಂದಿ, ಘೋರವು ತಪಶ್ಚರಣ ಮಾಡಿ, ಕರ್ಮ ನಿರ್ಜರೆಯಿಂದ ತನ್ನ ಪರಮ ಧ್ಯೇಯವಾದ ಶಾಶ್ವತ ಮುಕ್ತಿಯನ್ನು ಪಡೆಯಬೇಕೆಂಬ ಒಲವನ್ನು ಆತನಲ್ಲಿ ಉಂಟು ಮಾಡುವುದು; ಹೆಚ್ಚೇನು? ಈ ಪುರಾಣವು ತನ್ನ ಉದ್ದೇಶ್ಯವನ್ನು ಪೂರ್ಣವಾಗಿ ನೆರವೇರಿಸಿರುವುದು.

---

# ನಾಗಚಂದ್ರನ ವರ್ಣನೆಗಳು

(ಪ್ರೊ. ಕೆ. ಜಿ. ಕುಂದಣಗಾರ)

ಅಂದವಾದ ವಸ್ತು ದೃಷ್ಟಿಗೋಚರವಾದ ಕೂಡಲೆ ಅದನ್ನು ಕಣ್ತುಂಬ ನೋಡಬೇಕೆಂಬ ಬಲವಾದ ಬಯಕೆ ಪ್ರತಿಯೊಬ್ಬನಲ್ಲಿಯೂ ಹುಟ್ಟುವುದು ಸ್ವಾಭಾವಿಕವು. ಮನುಷ್ಯನ ಈ ಮನೋಧರ್ಮ ಕ್ಕನುಸರಿಸಿ ಉಂಟಾಗುವ ದೃಷ್ಟಿಸುಖವು ಕ್ಷಣಿಕವೆಂದೂ ನಿರಂತರ ವೆಂದೂ ಎರಡು ವಿಧವು. ದೃಷ್ಟಿಗೋಚರವಾದ ವಸ್ತು ಸಾಮಾನ್ಯ ಜನರ ಮನಸ್ಸಿನಲ್ಲಿ ಕಾಲೂರಿ ನಿಲ್ಲುವುದಿಲ್ಲ; ಅಲ್ಲಿ ಭಾವೋದ್ರೇಕವುಂಟಾ ಗುವುದಿಲ್ಲ. ಅಂತೇ ಆ ವಸ್ತುವಿನಿಂದ ಅವರಿಗಾಗುವ ಆನಂದವು ಕ್ಷಣಿಕವಾದುದು. ಮತ್ತೆ ಕೆಲವರಲ್ಲಿ ವಸ್ತುದರ್ಶನಮಾತ್ರದಿಂದ ಅದರ ವ್ಯಾಪಾರಗಳನ್ನು ಪರೀಕ್ಷಿಸುವ ಶಕ್ತಿಯು ಪ್ರಕಟವಾಗಿ ಮನೋಭಾವಗಳನ್ನು ಉದ್ರೇಕಿಸುವುದು; ಮನಸ್ಸೆಂಬ ಪರದೆಯ ಮೇಲೆ ಅದರ ಚಿತ್ರವು ಮೂಡುವುದು; ಅದರ ಸೌಂದರ್ಯವು ಹೃದಯವನ್ನು ಆವರಿಸುವುದು; ತದೇಕಧ್ಯಾನದಿಂದ ಬಾಹ್ಯವ್ಯಾಪಾರ ಗಳು ಮರೆತುಹೋಗುವುವು; ಕೂಡಲೆ ಸ್ಫೂರ್ತಿಯು ತಲೆದೋರು ವುದು; ಅದು ಇರುವ ಮಟ್ಟಿಗೂ ಭಾವಗಳು ಒಂದಿಲ್ಲೊಂದು ರೀತಿಯಿಂದ ಪ್ರಕಟವಾಗುವುವು. ಅವು ನಿರಂತರವಾಗಿ ಉಳಿಯ ತಕ್ಕವು. ಅವುಗಳನ್ನು ಪ್ರಕಟಗೊಳಿಸುವ ಮಾರ್ಗಗಳನ್ನು ವ್ಯಕ್ತವೆಂದೂ ಅವ್ಯಕ್ತವೆಂದೂ ಎರಡು ಭಾಗಗಳಾಗಿ ವಿಂಗಡಿಸಬಹುದು. ಸಹೃದ ಯರು ಚರ್ಮಚಕ್ಷುಗಳಿಂದ ಇಂತಹ ಪ್ರತಿಕೃತಿಗಳನ್ನು ನೋಡಿ ಅವು ಗಳಲ್ಲಿರುವ ಸೌಂದರ್ಯವನ್ನು ಪ್ರತ್ಯಕ್ಷವಾಗಿ ನಿರೀಕ್ಷಿಸಿ ಆನಂದಪಡ

ಬಹುದಾದ ಸಂದರ್ಭದಲ್ಲಿ ಅದು ವ್ಯಕ್ತರೂಪವಾಗುವುದು. ಅದು ಚಿತ್ರ ರೂಪದಿಂದರಬಹುದು, ಶಿಲ್ಪರೂಪದಿಂದಿರಬಹುದು, ಅಥವಾ ಕಟ್ಟಡದ ರೂಪದಿಂದಿರಬಹುದು. ಅದೇ ಸಹೃದಯನ ದೃಷ್ಟಿಯು ಅಂತರ್ಮುಖಿ ವಾಗಿ ಆತನಲ್ಲಿಯೂ ಅವೇ ಭಾವಗಳು ಉದ್ರೇಕಗೊಂಡು ಅಪ್ರತ್ಯಕ್ಷ ವಾದ ಆ ಕೃತಿಯ ಸೌಂದರ್ಯದಿಂದ ಅನುಭವಿಸುವ ಆನಂದವು ಅವ್ಯಕ್ತವು. ಅದು ಇಂತಹುದೇ ಎಂದು ಹೇಳಲಾಗುವುದಿಲ್ಲ. ಅದು ಕಾವ್ಯರೂಪವನ್ನು ಧರಿಸಿರಬಹುದು, ಕಾದಂಬರಿಯ ರೂಪವನ್ನು ಧರಿಸಿರಬಹುದು, ಅಥವಾ ನಾಟಕರೂಪವನ್ನು ಧರಿಸಿರಬಹುದು. ಅದನ್ನು ಓದಿ ಅನುಭವದಿಂದ ರಸಾಸ್ವಾದವನ್ನು ಪಡೆಯಬೇಕು. ಇದು ಕವಿಯ ಕಾರ್ಯ. ಇದಕ್ಕೆ ಕಾರಣವು ಪ್ರತಿಭಾಶಕ್ತಿಯು. ಇಂತಹ ಪ್ರತಿಭಾಸಂಪನ್ನರಾದ ಕವಿಗಳು ಕನ್ನಡದಲ್ಲಿ ಕಾವ್ಯಗಳನ್ನು ರಚಿಸಿರುವರೇ ? ಅವರ ಕೃತಿಗಳನ್ನು ಓದಿ ನಾವು ನೈಜವಾದ ಆನಂದ ವನ್ನು ಪಡೆಯಬಹುದೇ? ಎಂದು ಕೇಳಿದರೆ ಅದಕ್ಕೆ ಉತ್ತರವು ಇರುವ ರೆಂದು ಹೊರಡುವುದು. ಆದರೆ ಅವರ ಭಾವೋದ್ರೇಕಕ್ಕೆ ಸಾಂಪ್ರ ದಾಯದ ನಿರ್ಬಂಧವಿದ್ದುದರಿಂದ ಭಾವಗಳು ನಿರಾತಂಕವಾಗಿ ಹರಿ ಯಲು ಅವಕಾಶವು ದೊರೆಯದೆ ಹೋಗಿದೆ. ಅದು ಹೀಗೆ. ಪೂರ್ವದ ಕವಿಗಳಿಗೆ ರಾಜಾಶ್ರಯವೂ ಮಠಾಧಿಕಾರಿಗಳ ಆಶ್ರಯವೂ ಇದ್ದಿತು. ಅವರ ಕಾವ್ಯಗಳನ್ನು ಪರೀಕ್ಷಿಸುವವರು ಪಂಡಿತರು. ಆ ಪಂಡಿತರು ಕಾವ್ಯಗಳಲ್ಲಿ ಪ್ರಾಸ, ಹದಿನೆಂಟು ಅಂಗಗಳು ಮೊದಲಾದುವು ಇರಲೇ ಬೇಕೆಂದು ಕಟ್ಟುಮಾಡಿಕೊಂಡಿದ್ದರು. ಬಹುಶಃ ಕಾವ್ಯಸ್ಫೂರ್ತಿಗೆ ನಿರ್ಬಂಧವಿರಕೂಡದೆಂಬ ಸಂಗತಿಯು ಅವರಿಗೆ ಹೊಳೆದಿರಲಿಲ್ಲವೆಂದು ತೋರುತ್ತಿದೆ. ಕವಿಗಳಾದರೊ ಆ ಮಾರ್ಗವನ್ನುಳಿದು ತಮ್ಮ ಪ್ರತಿಭಾಶಕ್ತಿಯಿಂದ ಮತ್ತು ಕಲ್ಪನಾಚಾತುರ್ಯದಿಂದ ಕಾವ್ಯ ಗಳನ್ನು ರಚಿಸಿದರೆ ಅವುಗಳನ್ನು ಪಂಡಿತರು ಒಪ್ಪಲಿಕ್ಕಿಲ್ಲವೆಂಬ ಭೀತಿ

ಯುಳ್ಳವರು. ಹರಿಹರ–ರಾಘವಾಂಕರಂತಹ ಸ್ವಾತಂತ್ರ್ಯಪ್ರಿಯರಾದ ಮತ್ತು ನಿರ್ಭೀತರಾದ ಕವಿಗಳ ಮಾತು ಬೇರೆ. ಹೀಗೆ ಇಕ್ಕಟ್ಟಿನಲ್ಲಿ ಸಿಲುಕಿಕೊಂಡ ಪೂರ್ವದ ಕನ್ನಡಕವಿಗಳ ಕಾವ್ಯಗಳಲ್ಲಿ ಅಡಕವಾಗಿರ ಬೇಕಾದ ಸೌಂದರ್ಯದ ಬಹುಭಾಗವು ಒಳಸೋರಿ ಹೋಗಿದೆ ಮತ್ತೆ ಮಹಾಕಾವ್ಯಕ್ಕೆ ಅವಶ್ಯಕವಾದ ಹದಿನೆಂಟು ಅಂಗಗಳನ್ನು ಕವಿಗಳು ವರ್ಣಿಸುವ ಹವ್ಯಾಸಕ್ಕೆ ಬಿದ್ದಿರುವುದರಿಂದ ಅನೇಕ ಸಂದರ್ಭಗಳಲ್ಲಿ ತಾವು ಪ್ರತ್ಯಕ್ಷವಾಗಿ ನೋಡದ ಮತ್ತು ಅನುಭವಿಸದ ಸಂಗತಿಗಳನ್ನು ವರ್ಣಿಸಹತ್ತಿ ಆಯಾಭಾಗಗಳನ್ನು ನೀರಸ ಮಾಡಿದ್ದಾರೆ. ಈ ಪರಿಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ನಾವು ಅಭಿನವಪಂಪನನ್ನು ನೋಡಬೇಕಾಗುವುದು.

ನಾಗಚಂದ್ರನು ಆತ್ಮವಿಶ್ವಾಸದಿಂದ, ತಾನು ಆದಿಪಂಪನನ್ನು ಕಾವ್ಯಸೃಷ್ಟಿಯಲ್ಲಿ ಸರಿಗಟ್ಟಬಹುದೆಂಬ ಭಾವನೆಯಿಂದ, **ಅಭಿನವ ಪಂಪ**ನೆಂಬ ಬಿರುದನ್ನು ವಹಿಸಿದನು. ಈ ಬಿರುದಿಗೆ ತಕ್ಕಂತೆ ಆತನ ವರ್ಣನೆಗಳಿವೆಯೋ ಎಂಬುದನ್ನು ಕಂಡುಹಿಡಿಯಬೇಕಾಗಿದೆ. ಮಹಾಶಯರಾದ ಶೇಷ. ಭೀ. ಪಾರ್ಶ್ವನಾಥರವರು ಅಭಿನವಪಂಪನ ಸ್ಥಾನ ನಿರ್ದೇಶದಲ್ಲಿ ಹೀಗೆಂದಿರುವರು:—

"ಮಲ್ಲಿನಾಥಪುರಾಣದ ಕಥೆಯನ್ನು ನೋಡುವಲ್ಲಿ ಈ ಕವಿಯ ಜೈನಕಥಾಶರೀರಯುಕ್ತವಾದ ರಾಮಾಯಣವು ವಾಲ್ಮೀಕಿಯ ರಾಮಾಯಣದಷ್ಟು ಚಿತ್ತಾಕರ್ಷಕವಲ್ಲದಿದ್ದರೂ ಮೇಲೆಂದು ತೋರುತ್ತದೆ." "ಅಭಿನವಪಂಪಾಭಿಧನಾದ ನಾಗಚಂದ್ರಕವಿಗೆ ತತ್ಕೃತ ರಾಮಕಥೆಯಿಂದಲೇ ಮಹತ್ವವು ಬಂದಿರುವುದು. ಮಲ್ಲಿನಾಥ-ಪುರಾಣವು ರಾಮಕಥೆಯಷ್ಟು ರಮ್ಯವಾಗಿಲ್ಲವೆಂದು ಬೇರೆಯಾಗಿ ಸೂಚಿಸುವ ಕಾರಣವಿಲ್ಲ." "ಪಂಪರಾಮಾಯಣದಲ್ಲಿ ಕಥಾನಾಯಕಪ್ರತಿನಾಯಕರ ಆವೇಶವೇ ಮೊದಲಾದ ಅನೇಕ ಪ್ರಕರಣ

ಗಳಿರುವುವು. ಸೀತಾ ಸ್ವಯಂವರವೇ ಮೊದಲಾದ ರಸಭರಿತ ದೃಶ್ಯ ಗಳಿರುವುವು. ಪ್ರಕೃತಪುರಾಣದಲ್ಲಿ ಅಂಥ ಸಂದರ್ಭಗಳಿಗೆ ಅವಕಾಶ ವಿಲ್ಲವೆಂಬ ದೋಷವು ಕವಿಯದಲ್ಲದಿದ್ದರೂ ಪುರಾಣದ ದಾರಿಯಲ್ಲಿಯೇ ಕಥೆಯನ್ನು ಅದ್ಭುತವಾಗಿ ಮಾಡುವ ಆದಿಪುರಾಣದ ರೀತಿಯು ಮೇಲ್ತ ರದ್ದು...... ಪ್ರಸ್ತುತದ ಮಲ್ಲಿನಾಥಪುರಾಣವು ಎರಡನೆಯ ತರಗತಿಯದು.'' ಹೀಗೆ ಅಭಿಪ್ರಾಯಪಡುವಲ್ಲಿ ಅವರು ವಿಹಂಗಮ ದೃಷ್ಟಿಯಿಂದ ಮಲ್ಲಿನಾಥಪುರಾಣದೊಳಗಿನ ಉತ್ಕೃಷ್ಟಭಾಗಗಳನ್ನು ತೋರಿಸಿದ್ದಾರೆ ಮಾತ್ರ; ಉದಹರಿಸಿಲ್ಲ. ಇದರಿಂದ ಅವರ ಅಭಿ ಪ್ರಾಯವು ತಪ್ಪಿಹೋಗಿದೆಯೆಂದು ಮಾತ್ರ ಹೇಳಲಾಗದು. ಕಾವ್ಯ ವೆಂದರೆ ಜೀವಿತದ ವಿಮರ್ಶೆಯೆಂದು ಮ್ಯಾಥ್ಯೂ ಆರ್ನಾಲ್ಡನು ಹೇಳು ವಂತೆ ನಾಗಚಂದ್ರನು ಪ್ರತ್ಯಕ್ಷವಾಗಿ ಅನುಭವಿಸಿ ಹೃದಯದಲ್ಲಿ ಸ್ಥಿರ ವಾಗಿ ಚಿತ್ರಿಸಿಕೊಂಡು ಓದುಗರಿಗೆ ಹೃದಯಂಗಮವಾಗಿ ಹೇಳಿ ಅವ ರನ್ನು ಆನಂದಗೊಳಿಸುವ ಕೆಲವು ಸನ್ನಿವೇಶಗಳನ್ನು ಉದಹರಿಸಿ ಅವನ ಪ್ರತಿಭೆಯನ್ನು ತೋರಿಸಿದರೆ ಅವನ ಕವಿತಾಶಕ್ತಿಯು ಮನದಟ್ಟಾಗು ವುದು.

೧. ಪಂಪರಾಮಾಯಣದಲ್ಲಿ ನಾರದನು ಸೀತೆಯನ್ನು ಕುತೂ ಹಲದಿಂದ ನೋಡಬಂದು, ಕನ್ನೆವಾಡವನ್ನು ಪ್ರವೇಶಿಸಿ, ಕಾಪಿ ನಾಳ್ಗಳು ಬರಲು ಏಳುತ್ತ ಬೀಳುತ್ತ ಸತ್ತೆನೆಂದು ಓಡಿಹೋದ ವರ್ಣನೆಯು ಬಹು ಮನೋಹರವಾಗಿದೆ. ನೋಡಿ.

ಜನಕಂ ತನುಜೆಯನಿತ್ತಂ
ಮನುವಂಶಲಲಾಮನಪ್ಪ ರಾಮಂಗೆಂಬೀ ।
ಜನವಾರ್ತೆಗೇಳ್ದು ನಾರದ
ಮುನಿಗಾದುದು ನೋೞ್ಪ ಕೌತುಕಂ ಜಾನಕಿಯಂ ॥ (೪-೮೦)

ಪೆಂಡಿರ ಲೀಲೆಯುಂ ಯತಿಗೆ ನೋಟ್ಟಪ್ಪುದು ಪಾಟಿತೆಯೆ, ಮಂಜಿ
ಕಚ್ಛಟಂ ।
ಗುಂಡಿಗೆ ಬೋಳವಂಡೆ ಮಣಿದಂಡವಿವೀಕ್ಷಣ ಸೌಖ್ಯ
ಹೇತುವೇ ॥
ಕಂಡೊಡೆ ಬಾಲೆಯರ್ ತಮಗೆ ಪೇಸದೆ ಮಾಣ್ಬರೆ ನಾರದಂ
ಮರು ।
ಳ್ಗೊಂಡವೊಲಾಗಸಕ್ಕೆ ನೆಗೆದಂ ವ್ಯಥೆಯುಳ್ತೆ ಸರಾಗ ಸಂಯಮಂ
॥ ೮೧ ॥

ಅಂತು ನಾರದಂ ಗಗನವೀಧಿಯಿಂ ಮಿಥಿಲೆಗೆ ಬಂದು ಕನ್ನೆವಾಡದ ಬಾಗಿಲ್ಮಾಡಮಂ ಪುಗುವಾಗಳ್......ಅದೃಷ್ಟಪೂರ್ವಮಂ ನಾರದನ ವಿಕೃತಾಕಾರಮಂ ಕಂಡು ತರುಣಿ ಹರಿಣಿಯಂತೆ ಬೆರ್ಚಿಬಿಱುತೋಡುವುದುಂ—

ತತ್ತರುಣಿಯ ಒಱಿವಱಿಯುಂ
ಪತ್ತಿ ಹಿತಾಹಿತ ವಿವೇಕವಿಕಲಂ ಪಱಿಯುಂ ।
ಪೆತ್ತಾಮುನಿಪಂ ಭ್ರಾಮಕ
ದತ್ತೆಳಸುವ ಪಚ್ಚೆಗಬ್ಬಿನಕ್ಕೆಣೆಯಾದಂ ॥ ೮೩ ॥

ಅಂತು ಬಱಿವಱಿಯುಮಱಿಯುದೆಯ್ತ್ತುರ್ಪುದುಂ—

ಧಾತ್ರಿ ಪಱಿವಂತು ತನ್ನಂ
ಧಾತ್ರೀಜನಮುಡಸಿ ಪಿಡಿದು ಪರಿಭವಿಸುವುದುಂ ।
ಮಿತ್ರಂ ಶಲಭಕ್ಕೆನೆ ಮುನಿ
ನೇತ್ರೇಂದ್ರಿಯ ಲೋಭದಿಂದಮುಂದಘವಟ್ಟಂ ॥ ೮೪ ॥

ಆಗಳಾ ಕಳಕಳಮಂ ಕೇಳ್ದು—

ಕಡಿತಲೆಯುಂ ತೂಗುತ್ತುಂ
ಕಡುಗಲಿಗಳ್ಮುಟ್ಟಿ ಬರ್ಪುದುಂ ಭಯರಸದಿಂ ।

ನಡುಗುತ್ತುಂ ನಾರದಮುನಿ
ಕುಡುಮಿಂಚಿನ ಗೊಂಚಲಂತೆ ಗಗನಕ್ಕೊಗೆದಂ ॥ ೮೬ ॥

ಅಂತು ಪೊಳೆದು ಪಾಱಿ

ಪಿಂದಂ ಬೆನ್ನಗುಳ್ದಪ್ಪರೆಂದು ಪೆಱಗಂ ನೋಡುತ್ತುಮೋಡುತ್ತು
ಮೆ।
ಯ್ದುಂದಂ ಗಾಳಿಗೆಱಂಕೆ ಮೂಡಿದವೊಲಾಕಾಶಂಬರಂ ನೀಳ್ದುದಂ।
ಕುಂದೇಂದು-ಪ್ರಭೆಯುಂ ಮನಂಗೊಳಿಪುದಂ ವಿದ್ಯಾಧರೀ-
ಲೋಚನಾ।
ನಂದಸ್ಯಂದಿ-ತಟೀವಿಲಾಸವನಮುಂ ಕೈಲಾಸಮುಂ ನಾರದಂ ॥೮೭॥

ಅಂತಾನಗಮನೆಯ್ದಿ. .ಶಿಲಾತಲದೊಳ್ ವಿಶ್ರಮಿಸಿ ಮನೋವಿಷಾದ ಮುಮಂ ಗಗನಾಧ್ವಖೇದಮುಮಂ ತಳೆದು ತನ್ನೊಳಿಂತೆಂದಂ—

ಖೇದಮನೆನಗಿನಿತಂ ಸಂ
ಪಾದಿಸಿದಾ ಕನ್ನೆಗಳವಿಗಱಿದಖಿಲಂ ಸಂ॥
ಪಾದಿಸುವೆನೆಂದು ಪರಿಪೀ
ಡಾಮುಶ್ಚರಿತಕ್ಕೆ ನಾರದಂ ಬಗೆದಂದಂ ॥ ೮೮ ॥

ಎಷ್ಟೋ ಜನರು ಇಂತಹ ಸಂದರ್ಭಗಳನ್ನು ಪ್ರತ್ಯಕ್ಷವಾಗಿ ಕಂಡಿರಬಹುದು. ಎಷ್ಟೋ ಜನರು ಕೇಳಿರಬಹುದು. ಇದರಲ್ಲಿ ಸತ್ಯವಿದೆ, ಸೌಂದರ್ಯವಿದೆ. ಹೇಳುವಲ್ಲಿ ಚಾತುರ್ಯವಿದೆ. ಸನ್ನಿವೇಶದ ಚಿತ್ರವು ಮನಶ್ಚಕ್ಷುವಿನೆದುರಿಗೆ ಪ್ರತ್ಯಕ್ಷವಾಗಿ ನಿಂತು ಆನಂದಗೊಳಿಸುತ್ತಿದೆ.

೨. ನಾಗಚಂದ್ರನು ತುಂಟಕುದುರೆಗಳ ಉಪದ್ರವವನ್ನು ಪ್ರತ್ಯಕ್ಷವಾಗಿ ಕಂಡವನು. ಅವುಗಳನ್ನು ಏರುವಲ್ಲಿ ಪ್ರೀತಿಯುಳ್ಳವನು. ಆ ಸಂದರ್ಭದಲ್ಲಿ ಅನೇಕ ಅನುಭವಗಳನ್ನು ಪಡೆದವನು. ಈ ಸಂಗತಿಯನ್ನು ಕೆಳಗಿನ ಪದ್ಯಗಳಲ್ಲಿ ನೋಡಿ.

ನೃಪನೀತಂ ತುರಗಪ್ರಿಯಂ ವಿಷಮವಾಹಾರೋಹಣಾತ್ಯಂತ
ಲೋ ।
ಲುಪನೊಲ್ದೇಱಿದೆ ಮಾಣಸೇಱಿದೊಡೆ ಸಾಲ್ಗುಂ ಕೊಂಡು
ಪೋಪಂ ಮದೀ ॥
ಯಪುರಕ್ಕೆನ್ನಯ ಪೂಣ್ಕೆ ತೀರ್ಗುಮಿದಱಿಂ ಪೋಗೆಂದು ಸಿಕ್ಷೈಸಿ
ರೂ ।
ಪಪರಾವರ್ತನವಿದ್ಯೆಯಂ ತುರಗ ರೂಪಾದಂ ಚರಂ ಖೇಚರಂ
॥ ೧೦೫ ॥ ಪಂ. ರಾ. ಆ. ೪.

ಅಂತು ವಿಷಮ ಹಯವೇಷಮುಂ ತಳೆದು—

ಎಯ್ದದೆಡೆಯೆಲ್ಲಮುಂ ಪರಿ
ದೆಯ್ದು ಪುರೋಪವನಮೆಲ್ಲಮುಂ ತುಳಿದು ಪಲರ್ ॥
ಬಾಯ್ದೆಱೆದು ಪುಯ್ಯಲಿಡೆ ಕಡು
ಕೆಯ್ದುಕ್ಕಿವಗುದುರೆ ಪೊೞಲನೞಲಿಸಿತಾಗಳ್ ॥ ೧೦೬ ॥
ಕತ್ತರಿಸಿ ಕಿವಿಗಳಂ ನಸು
ಗುತ್ತುತ್ತುಂ ಮೆಯ್ಯಖಂಡಮುಂ ಘುರು ಘುರೆಸು ॥
ತ್ತೊತ್ತರಿಸೆ ಘೋಣಪವನನು
ದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯವೊಲ್ ॥ ೧೦೭ ॥

ಕರೆ ವೋಯೆಂಬತ್ತಲಿತ್ತಲ್ ತೊಲಗು ತೊಲಗು ಪೋಗೆಂಬ
ಬಾಯೆಂಬ ಬಿದ್ದಂ ।
ಬರಿಯೆಂಬೋವೋವೊ ಕೂಕೂಗುಗಿದೆನುಡಿದೆಸೇಗೆಯ್ಪನೆಂಬುಚ್ಚ
ನೀಚಂ ॥
ಪುರುಷಸ್ತ್ರೀಬಾಲವೃದ್ಧಸ್ಥವಿರಯುವಜನಾತಂಕ ಶಂಕಾತಿರೇಕಂ ।
ಪುರದೊಳ್ಪೊಣ್ಮಿತ್ತು ವಿದ್ಯಾಧರಕೃತಕಹಯಾಟೋಪ ಘೋರ
ಪ್ರಲಾಪಂ ॥ ೧೧೧ ॥

ಬಾಲಕರಂ ಕೆಲರ್ ಮುದುಪರಂ ಕೆಲರಕ್ಷಿವಿಹೀನರಂ ಕೆಲರ್ ।
ಬಾಲೆಯುರಂ ಕೆಲರ್ಪಿಡಿದು ಚೆಚ್ಚರದಿಂದಪರೀ ಪುಟಂಗಳಂ ॥
ಕೀಲಿಸಿ ತಮ್ಮತಮ್ಮ ಮನೆವೊಕ್ಕಿರೆ ತತ್ಪುರವೆಲ್ಲಮುಲ್ಲಕ ।
ಲ್ಲೋಲಮಕಾಲಮೃತ್ಯುಭಯವಿಹ್ವಲಮಾದುದು
ಸೂಕಳಾಸ್ಪದಿಂ ॥ ೧೧೨ ॥

ಆ ಸಮಯದೊಳ್ ಜನಕಂ ಬಂದು ನೋಡಲೊಡಂ—

ಸೂಕಳಮಲ್ತಿದು ಸಕಲ ಗು ।
ಣಾಕರಮೆನೆ ಜನಕಮುಖವಿಲೋಕನದಿಂದು ॥
ದ್ರೇಕಮುಸುಬ್ಬಿದಿರೆ ವಾಹಕ
ರಾಕುಟಿಲಾಶ್ವಕ್ಕೆ ಖರಖಲೀನಮನಿಟ್ಟರ್ ॥ ೧೧೪ ॥

ಒಟ್ಟಜೆಗೆಟ್ಟು ಕಾರ್ಯವಶದಿಂ ಖಚರಂ ಪಿಡಿಪಟ್ಟು ಪಲ್ಲಣಂ ।
ಗಟ್ಟಿಸಿಕೊಂಡುಮೇನೊ ಮುಖಲೀನಖಲೀನಕಶಾಭಿಘಾತದಿಂ ॥
ತೊಟ್ಟನೆ ನೋವನೆಯ್ದಿದಪಿದಾವುದು ಚೋದ್ಯಮೊ ಕೈತವಕ್ಕೆಕೈ ।
ಗೊಟ್ಟ ಖಳಂಗೆ ತೀವ್ರಪರಿವೇದನಬಂಧನಮಾಗದಿರ್ಕುಮೇ
॥ ೧೧೮ ॥

.. .. .. .. ..

ಪೋಗಲೆಂದು ಪಲ್ಲಣಿಸಿ ಕೆಲದೊಳಿರ್ದ ಕೃತಕ ತುರಂಗಮಂ ತರಿಸಿ—

ಉಂಗುಟಮನಂಕವಣಿಗೆ ಕ
ರಾಂಗುಳಿಯಂ ಸ್ಕಂಧಸಂಧಿಗುಯ್ದೇಱಿದನು ॥
ತ್ತುಂಗ ತುರಂಗಮಮಂ ನೃಪ
ತುಂಗಂ ಸೂಕಳಮಿದೆಂದು ಸೆಡೆದನೆ ಮನದೊಳ್ ॥ ೧೨೦ ॥

ತುಂಟ ಕುದುರೆಯಿಂದುಂಟಾದ ಗಲಭೆಯು ಮನಸಿನಲ್ಲಿ ನಾಟು ವುದು. ಜನರ ಭೀತಿಯಿಂದ ಎದೆನಡುಗುವುದು. ಇದೆಲ್ಲ ಭಾವೋ ದ್ರೇಕದ ಪರಿಣಾಮವಲ್ಲವೇ! ಅನುಭವದ ಸಂಗತಿಯಲ್ಲವೇ! ಜನಕನು

ಕುದುರೆಯನ್ನೇರುವುದು ಎಷ್ಟು ಸತ್ಯವಾಗಿದೆ! ಮೇಲಾಗಿ ಕುದುರೆಯನ್ನು ಹಿಡಿದು ಕಡಿವಾಣವನ್ನು ಹಾಕಿ ಚಮ್ಮಟಿಗೆಯಿಂದ ಹೊಡೆಯುವಾಗ ಲೋಕೋಕ್ತಿಯ ಅನುಭವವನ್ನೂ ತಂದುಕೊಡುತ್ತಿದ್ದಾನೆ. ಮಲ್ಲಿನಾಥಪುರಾಣದಲ್ಲಿ ಹಯಶಾಸ್ತ್ರವನ್ನೇ ನಮ್ಮೆದುರಿಗಿರಿಸುತ್ತಿದ್ದಾನೆ.

೩. ರಾವಣನು ಸೀತೆಯನ್ನು ಕದ್ದೊಯ್ಯುವಾಗ ಸೀತೆಗಾದ ದುಃಖವನ್ನೂ, ತಿರುಗಿ ಬಂದು ಸೀತೆಯಿಲ್ಲದುದನ್ನು ಕಂಡು ರಾಮನು ದುಃಖಿಸುವುದನ್ನೂ ನೋಡಿ—

'ಸಿಂಗನ ಕೈಗೆ ಸಿಲ್ಕಿ ಹರಿಣಾಂಗನೆವೋಲ್ದೆಸೆಗೆಟ್ಟು ರಾಮಚಂ ।
ದ್ರಾಂಗನೆ ನೀಲ್ದಿ ಕಣ್ಮಲರ್ಗಳಿಂದುಗೆ ಕಣ್ಬನಿಗಳ್ ಮಡಲ್ತ ಪ ।
ಕ್ಷ್ಮಂಗಳನೊತ್ತಿ ಕಾರಮುಗಿಲಿಂದುಗುತರ್ಪ ನವೋದಬಿಂದು ಜಾ ।
ಲಂಗಳೆನಲ್ ಬಿಮರ್ತಳನನಂ ತನುವಲ್ಲಿ ಮುಗುಳ್ತುದೆಂಬಿನಂ ॥ ೯-೧೦೭ ॥

ಬಲೆಗೊಳಗಾದ ಸೋಗೆನವಿಲಂತೆ ಭಯಾಕುಳೆ ತನ್ನ ಚಿತ್ತದೊಳ್ ॥
ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನ ॥
ಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನನೆಮುಚ್ಚೆವೋಗಿ ತ ।
ಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ ಮಗುಳ್ದುಂ ಪೊಱಪೊಣ್ಮೆ ಹಾರವಂ ॥ ೧೧೧ ॥

ಕ್ರೂರಾತ್ಮಂ ವಂಚಕನವಿ
ಚಾರಿ ದುರಾಚಾರಿ ಬಗೆಯದುಯ್ವವನೆನ್ನಂ ॥
ಹಾ ರಾಮಾ ಹಾ ರಾಮಾ
ಬಾರಿಪರಾರೆಂದು ಸೀತೆ ಶೋಕಂಗೆಯ್ದಳ್ ॥ ೧೧೩ ॥

.. .. .. .. .. ..

ಮಗುೞ್ದು ಬಂದು ಮುನ್ನಮಿರ್ದ ಲತಾಭವನದೊಳ್ ಮನೋವಲ್ಲಭೆಯುಂ ಕಾಣದೆ ಶಿಖಿಮುಖಕ್ಕೆ ಪಂದ ಪಾದರಸದಂತೆ ನಿಜನಿಸರ್ಗಧೈರ್ಯಗುಣಮದೃಶ್ಯಮಾಗೆ—

ಹಾಹಾ ಜನಕಸುತೇ ವೈ ।
ದೇಹೀ ವೈದೇಹಿಯೆಂದು ಪುದಿದಿರೆ ಮನಮಂ ।
ಮೋಹತಮಂ ದೀಪಂ ವಾ ।
ತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ ॥ ೧೧೬ ॥

ಅಂತು ಮೂರ್ಛೆವೋಗಿ ಕಿಱಿದಾನುಂ ಬೇಗದಿಂ—

ನನು ಬಿಸುಪೇಱೆ ಮೆಯ್ ಮಗುೞೆ ಕೆತ್ತುವ ತಾಣಮೆ ಕೆತ್ತೆ ಮಂದನಾ ।
ದುಸಿರ್ಗಳೆ ನಾಸಿಕಾಮುಕುಲದಿಂದಿನಿಸುಂ ಪೊಱಪೊಣ್ಮೆ ತಳ್ತುಸಂ ॥
ದಿಸಿದೆನೆ ಬಿರ್ಚೆ ಕಣ್ಮಲರ್ಗಳ್ಳಲರುತ್ತಿರೆ ಜಾನಕೀಯೆನು ।
ತ್ತುಸಿರ್ದುಸಿರ್ದೆೞ್ದನಾ ರಘುಕುಲಾಂಬರ ಚಂಡಮರೀಚಿ ಮೂರ್ಛೆಯಿಂ ॥ ೧೧೭ ॥

ವೈದೇಹಿಯನಾ ವನಾಂತರದೊಳೆಲ್ಲಿಯುಮಱಸಿ ಕಾಣದೆ—

ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯನಿಶ್ವಾಸೆಯಂ ।
ತಿಳಿರೇ ತಾವರೆಯೋ ಮದಾಳಿಕುಲವೋ ಕರ್ನೆಯ್ದಿಲೇ ಮತ್ತಕೋ ॥
ಕಿಳವೋ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕಂ ।
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ ॥ ೧೧೮ ॥

ಮೇಲೆ ಆರಂಭದ ಎರಡು ಪದ್ಯಗಳಲ್ಲಿ ಆವೇಗ, ಬೆರಗು, ಗಲಭೆ, ದುಃಖ, ಸಮ್ಮೋಹಗಳು ಏಕಕಾಲಕ್ಕೆ ಬಂದಿವೆ. ಮೂರನೆಯ ಪದ್ಯದಲ್ಲಿ ದುಃಖದಿಂದ ಕುತ್ತಿಗೆಯ ಸಿರಗಳುಬ್ಬಿ ಗದ್ಗದಿತವಾಗಿ ಒಂದೊಂದೇ ಶಬ್ದವು ಜಡವಾಗಿ ಹೊರಟು 'ಪಿಕರಪಸ್ರ-ಖ್ಯಾತೆಯಂ' ಎನ್ನುವಲ್ಲಿ ಬಿಕ್ಕುವಂತಾಗಿದೆ. ಆ ಮೇಲೆ ಸೀತೆಯನ್ನು ಅಲ್ಲಲ್ಲಿ ಹುಡುಕಹತ್ತಿರಲು ಪ್ರತಿಯೊಂದು ಶಬ್ದದಲ್ಲಿ ಕವಿಯು ದುಃಖವನ್ನು ತುಂಬಿರುವನು.

ಮತ್ತಮಾ ಮದಗಜ—ಗಮನೆ ವನ್ಯಗಜ—ಬೃಂಹಿತಕ್ಕೆ ತಲ್ಲಳಿಸಿ ತನ್ನಂ ತಕ್ಕೈಸಿದ ಸಲ್ಲಕೀ—ನಿಕುಂಜಮುಮನಾ—ಚಕೋರ—ಲೋಲ—ಲೋಚನೆ—ವಿಲೋಚನ— ಚಂದ್ರಿಕೆಯನೊಸರ್ವ—ಚಂದ್ರಕಾಂತ ಶಯ್ಯಾತಳದ ತಳಿರ್ವಾಸ—ಸುದಾಸೀನಂ ಗೆಯ್ದು ಸಮೆದ ಬಯಲ್ದಾವರೆ—ಯೆಸಳ—ಪಸೆಯ-ಸೆಸೆವ ತಮಾಲ—ವನಮಾಲೆಯುಮನಾ ಹೇಮ— ತಾಮರಸ— ಮುಖಿ— ಮುಖ—ಸಮೀರ—ಸೌರಭಕ್ಕೆಳಸಿ ಬಳಸುವಳಿಮಾಲೆಗೆ ಮುಗಿದು ಮುಯ್ಯನೋಸರಿಸಿದ ಸಪ್ತಚ್ಛದ—ಷಂಡಮುಮನಾ ಪೃಥು—ನಿತಂಬೆ ನಿತಂಬ—ಭರ— ಪರಿಸ್ಖಲಿತ— ಪದ— ವಿನ್ಯಾಸದಿಂದಂಚೆಯಂ ಪಳಂಚಲೆದ ತಣ್ಬುಲಿಲ ತಾಣಮುಮಂ......ಕನಕ—ಕದಳೀದಳ—ಶ್ಯಾಮೆ ಕದಳೀ—ದಳ—ವ್ಯಜನದ ತಣ್ಗಾಳಿಯನಸಂಗ-ಕೇಳೀ-ಪರಿಶ್ರಮಮ ನಾಜಿಸಿದ ಸಂಪಗೆಯ ಜೊಂಪಮುಮಂ ವಿಯೋಗ—ಶೋಕಾಕುಲ—ಚಿತ್ತನವಲೋಕಿಸುತ್ತುಂ— ¶

ಹೀಗೆ ರಾಮಚಂದ್ರನು ಪಡುವ ಸಂಕಟದಿಂದ ಓದುಗರ ಕಣ್ಣುಗಳಲ್ಲಿ ನೀರು ತುಂಬಿ ತುಳುಕುವುವು. ತಾನು ಅನುಭವಿಸಿದ ದುಃಖಕ್ಕೆ

¶ ಅಡ್ಡಗೆರೆ ಹಾಕಿದುದು ಕವಿಯ ದುಃಖದಿಂದ ಜಡವಾಗಿ ಬರುತ್ತಿರುವ ಶಬ್ದಗಳಿಗೆ ಸೂಚನೆ.

ಓದುಗರು ಪಾಲುಗಾರರಾಗಿರಲು ಕವಿಯ ಉದ್ದೇಶವು ಸಫಲವಾಯಿತು. ನೇಮಿಚಂದ್ರನು ಹೇಳುವಂತೆ 'ರವಿಕಾಣದುದಂ ಕವಿ ಕಾಣ್ಬಂ' ಎಂಬ ಉಕ್ತಿಯು ನಿಜವಾಯಿತು.

೪. ವಸಂತೋತ್ಸವದಲ್ಲಿ ಎಲ್ಲರಿಗೂ ಆನಂದ. ಅದರಲ್ಲಿಯೇ ತಲ್ಲೀನರಾಗಿ ಮಾನುರ ಮಲ್ಲಿಕಾಲತೆಗಳ ವಿವಾಹವನ್ನು ಕಂಡ ಸನ್ನಿವೇಶವನ್ನು ಮಲ್ಲಿನಾಥಪುರಾಣದಲ್ಲಿ ನೋಡಿ.

ಮುದಾಳಿ ಪಟಲಮಂ ನೋಡಿ

ಸುರಭಿಸಮೀರಣಂ ಬೆರಸು ಬೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ ॥
ಪರವಧುವಂ ವಿನೀಳಪರಿಧಾನವನಾಕೆ ಮಧುಪ್ರಸಂಗಕಾ
ತರೆ ಮುಸುಕಿಟ್ಟವೊಲ್ಕುಸುಮಿ ಪೀರ್ದುವು ಸೌರಭಮಂ
ಮುದಾಳಿಗಳ್ ॥ ೬–೪೦ ॥

ಬಂದವಲೋಕಸಂಗೆಯ್ದು—

ಅನುರೂಪಮಾಗೆ ಪುಟ್ಟಿಸಿ
ವನಜಭವಂ ಚೂತರಾಜನಂ ಮಲ್ಲಿಗೆಯುಂ ॥
ವನಮಿಥುನಂಗಳೊಳೇಂ ಮು
ನ್ನಿನ ತನ್ನ ಜಡಸ್ವಭಾವಮಂ ಮೀರಿದನೋ ॥ ೪೩ ॥

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ
ಪುಂಸ್ಕೋಕಿ,
ಕಳನಾದಂ ವೇದಮಂತ್ರಂ ಕುಡಿಗುಡಿ ಮಧು ಮೌಹೂರ್ತಿಕಂ
ಪೂತವಲ್ಲೀ।
ಕುಳನೆಲ್ಲಂ ನಿಬ್ಬಣಂ ಬಂದಬಲೆಯುರೆನೆ ಚೂತಂಗಮೀಮಲ್ಲಿಕಾ
ಕೋ।

ಮುಳಿಗಂ ಕೊಂಡಾಡಿ ಕೈನೀರೆಱೆದನತನುಲಾವಣ್ಯಪುಷ್ಪಾಂಬು
ವಂದಂ । ೪೪ ।

ಎಂದವನಿಪತಿ ಸಮಯೋಚಿತವಾಗ್ವಿಳಾಸನುಂ ಮೆಚ್ಚಿದುಮಾಸಂ
ತರಮುವಸರಂಬಡೆದು ಮಂಗಳಪಾಠಕಂ ಮದಾಳಿಕುಂತಳೆಗೆ ಮಲ್ಲಿಕಾ
ವಲ್ಲಭೆಗಭಿಮುಖನಾಗಿ ॥ ೪೫ ॥

ರತಿ ಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ ಹಿಮ |
ದ್ಯುತಿ ಲತೆ ಮಾವು ಕೀರಕಳಭಂ ಕಳಕಂಠರವಂ ರಥಾಂಗದಂ ॥
ಪತಿ ತಳಿರುಯ್ಯಲೋವರ ಸುಸಿಲ್ಕನೆವಿಲ್ ನನೆಯಂಬು ಮಂದ
ಮಾ |
ರುತನಳಿನೀನಿನಾದಮಿವಱಿಂ ಪೊಸಮಲ್ಲಿಗೆಗಕ್ಕೆ ಮಂಗಳಂ॥೪೬॥

ಈ ಸಂದರ್ಭವಲ್ಲಿ ನಾಗಚಂದ್ರನು ಉದ್ಯಾನಸೌಂದರ್ಯದಲ್ಲಿ ಓದುಗ ರನ್ನು ಮರುಳುಗೊಳಿಸಿ, ಉತ್ಸವವನ್ನು ನೋಡುತ್ತಿದ್ದ ಹಾಗೆ ಭ್ರಮೆ ಗೊಳಿಸಿ, ಅವರಿಗೆ ತಿಳಿಯಗೊಡದೆ ಮಲ್ಲಿಕಾ–ಮಾಸುರಂಗಳ ವಿವಾಹ ವನ್ನು ನೆರವೇರಿಸುವನು. ಇದೇ ಹುಟ್ಟುಕವಿಗಳ ರೀತಿ. ಅವರಿಗೆ ಅಭಿಮಾನವೆಷ್ಟು ! ಆತ್ಮವಿಶ್ವಾಸವೆಷ್ಟು! ನೋಡಿ—

ಸುಕರಕವಿತಾ–ಮನೋಹರ
ನ ಕವಿತೆಯಂ ಮೆಚ್ಚಿ ಮೆಚ್ಚುಗೊಟ್ಟಂ ಸಹಕಾ ॥
ರ ಕುಮಾರನೆಂದು ಮಣಿಕನ।
ಕಕೋಟಿಯುಂ ನೆವದೊಳಿತ್ತನಾಧರಣೀಶಂ ॥ ೬–೩೬ ॥

ತನ್ನ "ಕವಿತೆಯುಂ ಪರೀಕ್ಷಿಸುವಂಗೆ ಎಂಟೆರ್ದೆಯೇ" ಎಂದು ರನ್ನನು ಹೇಳಿಲ್ಲವೇ? ಸಾಹಿತ್ಯಪ್ರಪಂಚದಲ್ಲಿ ಈ ಕವಿಗಳು ಹೊಸಸೃಷ್ಟಿಯನ್ನು ಮಾಡಿರುವುದಲ್ಲದೆ ಬ್ರಹ್ಮನಿಂದ ಆಗದ ಕಾರ್ಯಗಳನ್ನು ಮಾಡಿತೋ ರಿಸಿರುವರು. ಆದುದರಿಂದಲೇ ನೇಮಿಚಂದ್ರನು ಹೀಗೆಂದಿರುವನು:—

ಕಿವಿಯಿಂದೀಂಟಿಸುವರ್ ಸಮಸ್ತರಸಮುಂ ತೋರ್ಪರ್ ಸರೋ
ಜಾತಮುಂ ।

ಯುವತೀಪ್ರೌಢಲತಾಗ್ರದೊಳ್ ಕುಮುದವೊಂದೊಂದಲ್ಲಿಯಾ ಬಾಲಪ
ಲ್ಲವಮುಂ ಪುಟ್ಟಿಪರಾರ್ಗ್ಯಮೋಹನಮುಮಂ ಮಾಳ್ಪೀ ಚಮತ್ಕಾರಮಂ ।
ಕವಿಗಳ್ ಬಲ್ಲವೊಲಸ್ಮರೆತ್ತಱೆವರಂತಾ ಬ್ರಹ್ಮನುಂ ಬಲ್ಲನೇ ॥
ಮುರಸೀಗುಂ ಮಣಿಯೀಗುಮೊಂದುಪಶುವೀಗುಂ ಕೇಳ್ ಮೆಂದೋಳಿಯೊಳ್ ।
ಪುರುಡಂ ಪುಟ್ಟಿಸಿ ಕಾಷ್ಟಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ ॥
ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು ।
ರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ ।

ಇನ್ನೂ ಎಷ್ಟೋ ವರ್ಣನೆಗಳನ್ನು ಉದಹರಿಸಬಹುದು. ವಿಸ್ತಾರ ಭಯದಿಂದ ಲೆಕ್ಕಣಿಕೆಯನ್ನು ಕೆಳಗಿಡಬೇಕಾಗಿದೆ.

ಭದ್ರಂ ಭೂಯಾತ್

---

# ಅಭಿನವಪಂಪನ ಶೈಲಿ

(ಎ. ಟಿ. ಸಾಸನೂರ)

ಪದರಚನೆ ಸಜ್ಜನಶ್ರವ– ।
ಣದೊಳಂಚೆಯ ತುಪ್ಪುಳಿಂಚೆಯುಂ ತೀವಿದವೊಲ್ ॥
ಮೃದುವೆನೆ ಪೊಸಬಗೆ ರಸಭಾ ।
ವದೊಳೋಕುಳಿಯಾಡೆ ಪೇೞ್ದನಭಿನವಪಂಪಂ ॥ ಮಲ್ಲಿನಾಥ
೧–೪೨

'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ' ಎಂದೆನಿಸಿದ ಆದಿಪಂಪನನ್ನನುಸರಿಸಿ ನಾಗಚಂದ್ರನು ಅಭಿನವ **ಪಂಪನಾ**ದನೋ, ಇಲ್ಲವೊ, ಅನುಕರಣಪಂಪನು ಮಾತ್ರ ಆಗಲಿಲ್ಲವೆಂಬುದು ಅವನ ಕಾವ್ಯಗಳಿಂದ ಸಹಜವಾಗಿ ತಿಳಿಯುವಂತಿದೆ. ಕುಲರಸಿಕನಾದ ಈತನು ತನ್ನ ಪ್ರತಿಭೆ–ಪಾಂಡಿತ್ಯಗಳಿಗೆ ಒಪ್ಪುವಂತಹ ಉತ್ತಮ ಸಂಸ್ಕಾರವನ್ನು ಪಡೆದು ಕಾವ್ಯರಚನೆ ಮಾಡಿರುವುದರಿಂದ ಇಲ್ಲಿ ಕಾಣುವುದು ಕೇವಲ ಪಂಪನ ಛಾಯೆಯಲ್ಲ, ಸ್ವತಂತ್ರವಾದ ಸುಂದರ ಸೃಷ್ಟಿ. ಅಂತೆ ಇವನು ಮಹಾಕವಿಗೋಷ್ಠಿಯಲ್ಲಿ ಮನ್ನಣೆ ಹೊಂದಿದ್ದಾನೆ. ಇಂತಹ ಕವಿಯ ಕಾವ್ಯಸೌಂದರ್ಯವು ತಿಳಿದು ವೈಶಿಷ್ಟ್ಯವು ಹೊಳೆಯಬೇಕಾದರೆ ಶೈಲಿಯ ವಿಚಾರವನ್ನು ಮಾಡಲೇಬೇಕಾಗುವದು. ಏಕೆಂದರೆ ತನ್ನ ಬಗೆಬಗೆಯ ಭಾವಗಳನ್ನು, ವಿಚಾರಗಳನ್ನು, 'ಕರುಳ ತಟ್ಟಿ, ಎದೆಯ ಮುಟ್ಟಿ' ಮನಮೆಚ್ಚುವಂತೆ ಹೇಳುವ ಶಕ್ತಿಯೇ ಮಹಾಕವಿಯ ಮುಖ್ಯ ಲಕ್ಷಣ. ಈ ಶಕ್ತಿ–ಈ ಇಂದ್ರ

ಚಾಲ ವಿದ್ಯೆ-ಯೇ ಶೈಲಿ. ಈ ಮಾತನ್ನೇ ಸುಪ್ರಸಿದ್ಧ ಆಂಗ್ಲವಿಮರ್ಶಕನಾದ ಕ್ವಿಲರ್ ಕೂಚ್ (Quiller Couch) ಈ ರೀತಿ ಹೇಳಿದ್ದಾನೆ: Style is the power to touch with ease, grace, precision, any note in the gamut of human thought. ಈ ಶೈಲಿ, ಪಾತ್ರ ಸಮಯ ಸನ್ನಿವೇಶಗಳಿಗೆ ತಕ್ಕಂತೆ ಬೇರೆ ಬೇರೆ ರೂಪಗಳನ್ನು ಧರಿಸಬಲ್ಲ ಕಾಮರೂಪಿಯೆಂದೇ ಹೇಳಬಹುದು. ಇದಕ್ಕೆ ಕವಿಕಲ್ಪನೆಯಲ್ಲಿ ರೂಪುಗೊಂಡ ದಿವ್ಯಸೃಷ್ಟಿಯನ್ನು ಯಥಾವತ್ತಾಗಿ ಚಿತ್ರಿಸುವ ಶಕ್ತಿಯಿದೆ. ಆದಕಾರಣ ಶೈಲಿಯನ್ನು ಕುರಿತು ವಿಚಾರಿಸುವುದೆಂದರೆ ಕಾವ್ಯಸೌಂದರ್ಯದ ಸಮಗ್ರವಿಮರ್ಶೆಯನ್ನು ಮಾಡಿದಂತೆಯೆ ಸರಿ.

ಆದರೆ ಕನ್ನಡ ಕವಿಗಳಲ್ಲಿ ಯಾರಿಗಾದರೂ ಇಂತಹ ಶೈಲಿಯಿದೆಯೆಂದರೆ ನಂಬುವವರೆಷ್ಟು ಜನ? "ಇವರಿಗಿರುವುದು ಒಂದೇ ಒಂದು ವಿಧವಾದ ಹಳಗನ್ನಡ ಶೈಲಿ; ಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗದ ಸಂಸ್ಕೃತಮಯವಾದ ವಿಚಿತ್ರಶೈಲಿ; ಅತ್ತರೂ ಒಂದೆ, ನಕ್ಕರೂ ಒಂದೆ. ಕವಿ ಯಾವನೇ ಇರಲಿ, ಯಾವ ಕಾಲದವನೇ ಇರಲಿ, ಕಾವ್ಯವಿಷಯವು ಎಂತಹದೇ ಇರಲಿ, ಹೇಳುವ ರೀತಿಯಲ್ಲಾದರೋ ಭೇದವಿಲ್ಲ. ಆಚಲೋಽಯಂ ಸನಾತನಃ ಎಂಬಂತಿದೆ" ಎನ್ನುವವರು ಹಲವರಿದ್ದಾರೆ. ಕನ್ನಡಿಗನಲ್ಲದ ರಾಜಶೇಖರನು ೯ನೆಯ ಶತಮಾನದಲ್ಲಿ

ರಸಃ ಕೋಽಪ್ಯಸ್ತು ಕಾಪ್ಯಸ್ತು ರೀತಿಃ ಕೋಽಪ್ಯಸ್ತುವಾ
ಗುಣಃ
ಸಗರ್ವಂ ಸರ್ವ ಕರ್ಣಾಟಾಷ್ಟಂಕಾರೋತ್ತರಪಾಠಿನಃ

ಎಂದು ಕನ್ನಡಿಗರ ವಾಚನರೀತಿಯನ್ನು ಕುರಿತು ಹೇಳಿದ್ದನ್ನೇ ಇಂದು ಕನ್ನಡಿಗರಾದ ನಾವು ನಮ್ಮ ಕಾವ್ಯರೀತಿಯನ್ನು ಕುರಿತು

ತಿಳಿದುಕೊಳ್ಳಬಹುದೆನ್ನುವವರು ಕಡಿಮೆಯಿಲ್ಲ. ಇದು ನಿಜವೆನ್ನುವು ದಾದರೆ ಕನ್ನಡದಲ್ಲಿ ಮಹಾಕವಿಗಳೇ ಇಲ್ಲವೆಂದು ನಿಶ್ಶಂಕವಾಗಿ ಹೇಳಬಹುದು. ಏಕೆಂದರೆ ರಸಭಾವಗಳ ವ್ಯಕ್ತ್ಯಸ್ವರೂಪವಾದ ಶೈಲಿ ಸಮಯೋಚಿತವಾದ ರೂಪವೈವಿಧ್ಯವನ್ನು ತೋರದೆ ಹೋದರೆ ಆ ರಸಭಾವಗಳಲ್ಲಿಯೇ ಅಷ್ಟು ಶಕ್ತಿಯಿಲ್ಲವೆನ್ನಬೇಕಾಗುವದು. ಎಂದ ಮೇಲೆ ವಿವಿಧಾಕಾರವಾದ ಶೈಲಿಯಿಲ್ಲದವನು ಮಹಾಕವಿಯಲ್ಲವೆ ನ್ನುವ ಮಾತು ಯಥಾರ್ಥವಾದುದೇ ಸರಿ. ಆದರೆ ಕನ್ನಡದ ಸ್ಥಿತಿ ಈ ವಿಷಯದಲ್ಲಿ ಹೀನವಾಗಿಲ್ಲವೆಂಬುದು ಕಣ್ತೆರೆದು ನೋಡುವವರಿಗೆ ಸುಲಭವಾಗಿ ತಿಳಿಯುವಂತಿದೆ. ಪಂಪ, ರನ್ನ, ನಾಗಚಂದ್ರ ನೇಮಿಚಂದ್ರ, ಜನ್ನ ಮೊದಲಾದವರು ಬರೆದಿರುವುದು ಹಳಗನ್ನಡದ ಚಂಪೂಶೈಲಿಯಾದರೂ ಅವರ ಕಾವ್ಯಗಳಲ್ಲಿ ಕೇಳಬರುವ ಧ್ವನಿ ಒಂದೇ ವಿಧವಾಗಿಲ್ಲ. ಒಬ್ಬೊಬ್ಬರಿಗೂ ಒಂದು ಸುಂದರವಾದ 'ಗಭೀರ ನಿನದ'ವಿದೆ;ಆ ಒಂದೊಂದು ನಿನದದಲ್ಲಿ ಒಂದಾಗಿ ಸೇರಿದ ತಾನವಿತಾನ ಗಳೂ ಹಲವಿವೆ. 'ಕ್ವಚಿದ್ವೀಣಾವಾದ್ಯಂ ಕ್ವಚಿದಪಿಚ ಹಾಹೇತಿ ರುದಿತಂ'. ಇದನ್ನು ನಾವು ಕಿವಿದೆರೆದು ಕೇಳಿ ಆನಂದಿಸಬಹುದು, ಮರುಗಿ ಕಂಬನಿ ಸುರಿಸಬಹುದು. ನಾಗಚಂದ್ರನ ವಿಷಯದಲ್ಲಿ ಇದು ಯಾವರೀತಿಯಾಗಿದೆಯೆಂಬುದನ್ನೇ ಈಗ ನಾವು ವಿಚಾರಿಸಿ ತಿಳಿಯಬೇಕಾಗಿದೆ.

ನಾಗಚಂದ್ರನಿಗೆ ಒಂದು ವಿಶಿಷ್ಟವಾದ ಸುಂದರಶೈಲಿಯಿದೆ, ಎಂದರೆ ಅವನು ತನ್ನ ಹಿಂದಿನವರಿಂದ ಯಾವುದನ್ನೂ ಸ್ವೀಕರಿಸದೆ ಸ್ವತಂತ್ರ ಪದರಚನೆಯನ್ನು ಕಲ್ಪಿಸಿಕೊಂಡನೆಂದು ಅರ್ಥವಲ್ಲ. ಯಾವ ಕವಿಯೂ ಈ ರೀತಿ ಮಾಡಲಾರನು. 'ಪೂರ್ವಕಾವ್ಯರಚನೆಗಳಂ ತಾಂ ಮೊದಲೊಳ್ ಕಲ್ತಿಂಗಲ್ಲದೆ ಪದದೊಳ್ ಜಾಣುಂ ಬೆಡಂಗು ಮಕ್ಕುಮೆ ಕೃತಿಯೊಳ್' ಎನ್ನುವದಂತೂ ಕನ್ನಡ ಕವಿಗಳೆಲ್ಲರೂ

ಕೇಳುವ ಪ್ರಶ್ನೆಯಾಗಿದ್ದಿತು. ಎಂದಮೇಲೆ ಕನ್ನಡ ಸಂಸ್ಕೃತ ಮಹಾಕಾವ್ಯಗಳಲ್ಲಿ ಅಸಾಧಾರಣ ಪಾಂಡಿತ್ಯವನ್ನು ಪಡೆದ ನಾಗಚಂದ್ರನ ಕಾವ್ಯಗಳಲ್ಲಿ ಅವರಿವರ ಪ್ರಯೋಗಗಳು ಕಂಡುಬಂದರೆ ಆಶ್ಚರ್ಯವಲ್ಲ. ಆದರೆ ಶೈಲಿಯೆಂದರೆ ಕೇವಲ ಪದಪ್ರಯೋಗವಲ್ಲ, ಅದಕ್ಕೆ ಜೀವಕಳೆಯನ್ನು ಕೊಡಬಲ್ಲ ಶಕ್ತಿ. ಅಂತೇ ಪಂಪನ ಮೇಲ್ಪಂಕ್ತಿಯನ್ನಿಟ್ಟುಕೊಂಡ ರನ್ನನಿಗೂ ಘನವಾದ ಶೈಲಿಯೊಂದಿದೆ. ಪಂಪರಾಮಾಯಣದ ಪ್ರಕೃತಿವರ್ಣನೆ ಯುದ್ಧವರ್ಣನೆಗಳಿಗೆ ಮನಸೋತ ಮುದ್ದಣನು ತನ್ನ ರಾಮಾಶ್ವಮೇಧದಲ್ಲಿ ನಾಗಚಂದ್ರನ ಶಬ್ದಗಳನ್ನೂ ಭಾವಗಳನ್ನೂ ಮನವಾರೆ ಸೂರೆಗೊಂಡರೂ§ ಅವನದೇ ಆದ ಶೈಲಿಯೊಂದು ಅಲ್ಲಿದೆಯೆಂದು ನಾವು ಧೈರ್ಯದಿಂದ ಹೇಳುತ್ತಿದ್ದೇವೆ. ಆದುದರಿಂದ ಪೂರ್ವಕವಿಗಳ ಪ್ರಯೋಗಗಳನ್ನು ಪಯೋಗಿಸಿದರೂ ನಾಗಚಂದ್ರನ ಶೈಲಿ ಪೂರ್ವದವರದಲ್ಲ. ಇವನು ಅಭಿನವಪಂಪನಾಗುವ ಸಂಕಲ್ಪದಿಂದ ಹೊರಟಿರುವುದರಿಂದ ಆದಿಪಂಪನ ಎರಡೂ ಕಾವ್ಯಗಳನ್ನು ಬಹು ಸೂಕ್ಷ್ಮವಾಗಿ ಓದಿರಬೇಕು. ಅವನಂತಹ ಕಾವ್ಯರಚನೆ ತನಗೂ ಸಾಧ್ಯವೆಂಬ ಆತ್ಮವಿಶ್ವಾಸವೂ ಅವನಲ್ಲಿ ಹುಟ್ಟಿರಬೇಕು. ಈ ಕಾರಣದಿಂದಲೇ ನಾಗಚಂದ್ರನಲ್ಲಿ ಪಂಪನ ಪಡಿನೆಳಲು ಹಲವೆಡೆ ಕಾಣುತ್ತಿದೆಯೆನ್ನಬಹುದು. 'ಚರಿತಪುರಾಣ'ದಲ್ಲಂತೂ ಕೆಲವು ಕಡೆ ರಾಮ ಲಕ್ಷ್ಮಣರ ಕಥೆಯು ಪಂಪನ ಧರ್ಮಾರ್ಜುನರ ಕಥೆಯೋ ಎನ್ನುವಂತಿದೆ. ಪಂಪಭಾರತದ ದ್ರೌಪದೀ ಸ್ವಯಂವರ, ಪಾಂಡವವನವಾಸಗಮನ, ನಾರದವರ್ಣನೆಗಳು ನಾಗಚಂದ್ರನಲ್ಲಿ ಸ್ವಲ್ಪ ಬೇರೆ ರೂಪದಿಂದ ರಾಮಚಂದ್ರಚರಿತಪುರಾಣ

---

§ ರಾಮಾಶ್ವಮೇಧ ಪುಟ ೩; ಪಂ. ರಾ. ೭ನೆಯ ಆಶ್ವಾಸ ೧೪೨-೧೬೨

,, ಪುಟ ೬೭-೬೮ ,, ,, ೮೫- ೮೮

ನಿದರ್ಶನಕ್ಕಾಗಿ ಮಾತ್ರ ಇವನ್ನು ಕೊಟ್ಟಿದೆ.

ದಲ್ಲಿವೆ. ಮಲ್ಲಿನಾಥಪುರಾಣದಲ್ಲಿ ಎಂಟನೆಯ ಆಶ್ವಾಸದಲ್ಲಿಯ ನೃತ್ಯ ವರ್ಣನೆಯಾದರೂ ಪಂಪನ ಆದಿಪುರಾಣದ ನೆನಪನ್ನು ತಂದುಕೊಡುತ್ತದೆ. ಪಂಪನ ಪ್ರೀತಿಯ ಉಪಮೆಗಳಾದ 'ಪಂದೆಯುಂ ಪಾವಡದಂತೆ' 'ಬೇರೊಳ್ ಬೆನ್ನೀರಂ ಪೊಯ್ದಂತೆ' ಮೊದಲಾದುವು ನಾಗಚಂದ್ರನಿಗೂ ಪ್ರಿಯವಾಗಿವೆ. ಇದೆಲ್ಲವನ್ನು ಒಪ್ಪಿದಮೇಲೂ ನಾಗಚಂದ್ರನಲ್ಲಿ ಮಹಾಕವಿಗೆ ಶೋಭಿಸುವ ಅವನದೇ ಆದ ಶೈಲಿಯೊಂದಿದೆಯೆಂಬ ಮಾತಿಗೆ ಬಾಧಕವಿಲ್ಲ.

ನಾಗಚಂದ್ರನು ಕಾವ್ಯತತ್ವಗಳನ್ನರಿತ ಪಂಡಿತನಾದುದರಿಂದ ಶೈಲಿ ಹೇಗಿರಬೇಕೆಂಬುದರ ಸ್ಪಷ್ಟವಾದ ಕಲ್ಪನೆ ಅವನಿಗಿತ್ತು. ಅವನು ತನ್ನ ಮಲ್ಲಿನಾಥಪುರಾಣದಲ್ಲಿ ಹೇಳಿರುವ

ಬಗೆಕಿಱಿದು ಮಾತು ಪಿರಿದೆನೆ।
ಬಗೆಯುಂ ನುಡಿ ಮುಟ್ಟಿನುಡಿಯದೆನೆ ಬಗೆ ಪೆಱರಂ॥
ಬಗೆಗೊಳಿಸಲಾಱದೆನೆ ಪೇ।
ಳ್ವಿಗಾವಿಲರ್ ಕವಿತೆಗೇಕೆ ಮುಯ್ಯಂ ಮಾಳ್ಪರ್ ॥೧-೩೧॥

ಎಂಬ ಪದ್ಯವನ್ನೋದಿದರೆ ಕಾವ್ಯಶೈಲಿಯಲ್ಲಿರಬೇಕಾದ ಗುಣಗಳನ್ನು ಅವನು ಸ್ಪಷ್ಟವಾಗಿ ತಿಳಿದಂತಿದೆ. ಬರಿ ಶಬ್ದಾಡಂಬರಕ್ಕೆ ಮೋಹಿಸದೆ ಭಾವವ್ಯಂಜನವನ್ನೆ ಮುಖ್ಯವಾಗಿಟ್ಟುಕೊಂಡು ಪಾಠಕರ ಹೃದಯಗಳನ್ನು ಸೆಳೆಯಬಲ್ಲವನೆ ಕಾವ್ಯರಚನೆಗೆ ಅಧಿಕಾರಿಯೆಂದು ಸಾರುವಾಗ ನಮ್ಮ ಕವಿ ಅಮೂಲ್ಯವಾದ ಸಿದ್ಧಾಂತವನ್ನೇ ಮಾಡಿದ್ದಾನೆ. ಅದನ್ನೇ ನಾವು ಇವನ ಶೈಲಿಯ ಒರೆಗಲ್ಲಾಗಿಟ್ಟುಕೊಳ್ಳಬಹುದು. ಏಕೆಂದರೆ ಆತ್ಮಪ್ರಶಂಸೆ, ಪರನಿಂದೆಗಳು ಕನ್ನಡದ ಸಣ್ಣಪುಟ್ಟಕವಿಗಳಲ್ಲಿಯೂ ಹಾಸುಹೊಕ್ಕಾಗಿ ಸೇರಿರುವದರಿಂದ ಅವರಮಾತನ್ನೇ ನಂಬುವುದು ಹಲವುಸಲ ನ್ಯಾಯವಾಗದು. ಹೆರವರ ಕಾವ್ಯಗಳಲ್ಲಿರಬೇಕೆಂದು ಸಾರುವ ಗುಣಗಳೇ ತಮ್ಮಲ್ಲಿರದಿದ್ದರೂ ಇವೆಯೆಂಬ

ಆತ್ಮವಂಚನೆಗೆ ಗುರಿಯಾದವರ ಸಂಖ್ಯೆ ನಮ್ಮಲ್ಲಿ ಕಡಿಮೆಯಾಗಿಲ್ಲ. ಅಂತೆ ನಾಗಚಂದ್ರನ ಮಾತು ಅವನ ಕೃತಿಯಲ್ಲೆಷ್ಟುಮಟ್ಟಿಗೆ ವ್ಯಕ್ತವಾಗಿದೆಯೆಂಬುದನ್ನು ನಾವು ನೋಡಲೇಬೇಕು.

ಈ ಕವಿಯ ಕಾವ್ಯಗಳೆರಡನ್ನೂ ಓದಿದಮೇಲೆ—ಓದುವಾಗಲು ಕೂಡ—ಕಂಡುಬರುವುದೆಂದರೆ ಅವನ ಶೈಲಿಯ ನಿರರ್ಗಳ ಪ್ರವಾಹ. ವರ್ಣಿಸುವ ವಿಷಯವು ಯಾವುದೇ ಇರಲಿ, ಇವನಿಗೆ ಮಾತ್ರ ವರ್ಣಿಸುವದಕ್ಕೆ ತಡೆಯಿಲ್ಲ; 'ಬರೆಬರೆದಂತದಂ ತೊಡೆದು ತೊಟ್ಟನೆ' ನಿಲ್ಲಿಸುವ ಅವಶ್ಯಕತೆಯಿಲ್ಲ. ಜಿನವರ್ಣನೆ, ಪುರವರ್ಣನೆ, ಪ್ರಕೃತಿವರ್ಣನೆ ಮೊದಲಾದ ಯಾವುದರಲ್ಲಿ ನೋಡಿದರೂ ಇವನದು ಸಿದ್ಧಹಸ್ತ. ಬೇಕಾದ ಶಬ್ದಗಳು ತಾವಾಗಿಯೇ ಬರುವಂತಿದೆ. ಎಂದರೆ ವರ್ಣ್ಯವಸ್ತುವನ್ನು ಸ್ಪಷ್ಟವಾಗಿ ಕಾಣುವ **ದರ್ಶನಶಕ್ತಿ** ಇವನಿಗಿತ್ತು, ಅದಕ್ಕೆ ತಕ್ಕ **ಪ್ರದರ್ಶನಶಕ್ತಿ**ಯೂ ತಾನಾಗಿ ಬಂದಿತು. " Every impression has its own expression. " ಎಂದಮೇಲೆ ಇವನಲ್ಲಿ ಭಾವವು ಕಿರಿದಾಗಿ ಮಾತೇ ಹಿರಿದಾಗುವ ಸಂಭವವಿರಲಿಲ್ಲವೆಂದ ಹಾಗಾಯಿತು. ಉದಾಹರಣೆಗಾಗಿ ಕೆಲವು ಪದ್ಯಗಳನ್ನು ನೋಡಬಹುದು:

ಬಿಸಸೂತ್ರದ ಕಟಿಸೂತ್ರಂ
ಪೊಸ ದುಗುಲದ ಕೋವಣಂ ಕಮಂಡಲು ರಾರಾ।
ಜಿಸೆ ದಂಡಪಾಣಿ ಪೊಕ್ಕಂ
ಕಿಸುರಱೆಪಂ ಪಿಸುಣಪಸರಿಗಂ ನೃಪಸಭೆಯಂ॥ ರಾ. ೩-೧೯
ಮಿಾಱಿದೆ ಕೀಱಿದೆ ನೇಣಂ
ತೋಱಿದ ದೆಸೆಗಾಕೆಗಂ ಹಯುಕ್ಕಂ ಚಿತ್ರಂ॥
ಬೇಱಲ್ಲೆನೆ ಪರಿದುದು ಜವ
ನೇಱಿದ ರಥಮಿಂತಿದೆನೆ ರಥಂ ದಶರಥನಾ॥ **೩-೫೩**

ಒಡನಾಡಿಯುಮೊಡನೋದಿಯು
ಮೊಡವಳೆದುಂ ಪಲವುಕಾಲದಿಂದನುಬಂಧಂ ॥
ಗಿಡದೊಡಲೆರಡನುವೊಂದೆನೆ
ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್ ॥ ೪–೬

ಒದವಿದಚಾಪಟಂಕೃತಿ ಭಯಂಕರಮಾಗೆ ವರೂಥಭಾರದಿಂ
ದದಿರೆ ನೆಲಂ ಮನಃಪವನವೇಗದಿನೆಯ್ದಿ ಬಲಾ ಮಹಾಬಲಂ
ಕದನಮುದಾವಿಲಂ ಕಟಿಸಿಯೆ ಬಲ್ಸರಿಯೆಂಬಿನಮುಂಬನಂಬುನ
ಟ್ಟುದೆನೆಟಿಸಾಗೆ ಕೂಡೆ ಗತಜೀವಿತಮಾಯ್ತು ಕಿರಾತಸಾಧನಂ ॥

ಇಲ್ಲಿ ಒಂದೊಂದೂ ಒಂದು ಶಬ್ದಚಿತ್ರದಂತಿದೆ; ಎಲ್ಲಿಯೂ ವ್ಯರ್ಥ ಪದಪ್ರಯೋಗವಿಲ್ಲ— 'ದರವುರಮುಮಂಟಸುಂಟಿಯುಂ' ಇಲ್ಲ. ಇದು ಇವನ ಕಾವ್ಯಗಳಲ್ಲೆಲ್ಲ ಕಂಡುಬರುವ ಗುಣವಾದುದರಿಂದ ಅದನ್ನು ಕೆಲವೇ ಉದಾಹರಣೆಗಳಿಂದ ತಿಳಿಸಲಾಗದು.

ಈ ರೀತಿ ಪ್ರವಾಹವಾಗಿ ಹರಿಯುವ ಶೈಲಿ ಕೆಲವೆಡೆ ಶಾಂತವಾಗಿ

ಮದನಪತತ್ರಿ ನಿನ್ನಡೆಸೆಗಾಣದು ಮೋಹಮಹಾಹಿ ನಿನ್ನನ।
ಣ್ಮದು ಕಲುಷಾನಲಂ ನಿಜದಯಾರಸದಿಂ ಮುಸಿಯಾಯ್ತು ಪಾಪಮಿ।
ಲ್ಲದ ಪಯಣಕ್ಕೆ ನಿನ್ನನುಡಿ ಸಂಬಳಮಾಯ್ತೆನೆ ಪೆಣ್ಣಮಣ್ಣಮೋ।
ಹದ ಪರಮಾತ್ಮರಂತಿರಲಿ ನೀನೆ ಜಗತ್ಸುತನೈ ಜಿನೇಶ್ವರಾ ॥
ರಾ. ೫–೯

ಎಂದು ತೋರಿದರೆ ಇನ್ನು ಕೆಲವೆಡೆ

ಘನಗರ್ಭಾಶಾವಧೂಪುಂಸವನದೆಸೆವ ತೂರ್ಯಸ್ವನಂ ಚೂಳಿಕಾಪ।
ರ್ಘನಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯಘೋಷಂ ಎದೂರಾ।
ವನಿಯೊಳ್ ವೈಡೂರ್ಯರತ್ನಂ ಜನಿಯಿಸೆ ನೆಗಟ್ದಾನಂದ ಭೇರೀರವಂ ತಾ।

ನೆಸೆ ರೋದೋಭಾಗದೊಳ್ ಘೂರ್ಣಿಸಿದುದಘನವಾಂಭೋದ
ಗಂಭೀರನಾದಂ ॥ ರಾ. ೭–೧೫೦

ಬೀಸುತ್ತುಂ ಕಾಲದಂಡಪ್ರತಿಮಘನಗದಾದಂಡಮಂ
ಕಣ್ಗಳಿಂದಂ।
ಸೂಸುತ್ತುಂ ಕೆಂಡಮಂ ಮೇಳಿಸೆ ಜಯವಧು ತನ್ನಜ್ಞ
ದೋರ್ದಂಡಮಂ ಸಂ।
ತ್ರಾಸಂ ಸೇನಾದ್ವಯಕ್ಕಂ ಸಮನಿಸೆ ತೆಱಪಂ ಪಾರ್ದು
ಸುಗ್ರೀವನಂ ಮಾ।
ಯಾ ಸುಗ್ರೀವಂ ಗದಾದಂಡದಿನಡಸಿ ಸಿಡಿಲ್ ಪೊಯ್ವವೋಲ್
ಕಾದಿಪೊಯ್ಗಂ ॥ ೧೦–೨೬

ಎಂದು ಘೋರ್ಗರೆಯುತ್ತಿದೆ. ಬೇರೆಡೆ

ಕಲಹಂಸಾಲಸಯಾನೆಯಂ ಮೃಗಮದಾಮೋದಾಸ್ಯನಿಶ್ವಾ
ಸೆಯಂ।
ತಳಿರೇ ತಾವರೆಯೋ ಮದಾಳಿಕುಳಮೋ ಕರ್ನೆಯ್ದಿಲೇ ಮತ್ತ
ಕೋ।
ಕಿಳಮೋ ಕಂಡಿರ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ।
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ ॥

ಎಂಬುದು ಹೃದಯವನ್ನು ಕರಗಿಸುತ್ತದೆ. ಸುಳಿಸುಳಿದು ಚೆಲ್ಲಾಟವಾಡುವ ರೀತಿಯನ್ನು ಸ್ತ್ರೀವರ್ಣನೆಗಳಲ್ಲಿ ಬೇಕಾದಷ್ಟು ಕಾಣಬಹುದು —ಸ್ವಲ್ಪ ಮೇರೆಮೀರಿ ಸ್ವೇಚ್ಛೆಯಿಂದ ವರ್ತಿಸುವುದನ್ನೂ ನೋಡಬಹುದು. ಸಾತ್ವಿಕಶಿರೋಮಣಿಯಾದ ರಾಮನು ಜಗನ್ಮಾತೆಯೆನಿಸಿದ ಸೀತೆಯನ್ನು ಕಳೆದುಕೊಂಡು 'ಸ್ಮರರಾಜರಾಜ್ಯಮಂಗಳವಣಿ| ದರ್ಪಣೋಪಮನೋಪಳವಕ್ತ್ರ|ಮನೆಲ್ಲಿ ಕಾಣ್ಬೆನೊ' ಎಂದು 'ಕಂತು ಸಂತಾಪದಿಂದೊಸಲುತ್ತುಂ ಕನಲುತ್ತುಂ' ಇದ್ದನೆಂದು ಹೇಳುವದು

ಕೂಡ ನಾಗಚಂದ್ರನಿಗೆ ವಿಚಿತ್ರವಾಗಿ ತೋರಿರಲಾರದು. ಏಕೆಂದರೆ ಕೇವಲಜ್ಞಾನವನ್ನು ಪಡೆದ ಕೇವಲಿಗಳೂ 'ಮುಕ್ತಿಶ್ರೀಮುದಾಸಂಭೋಗ ನಿರತ'ರಾಗಿರುವುದಿಲ್ಲವೇ ಇವನ ಕಾವ್ಯಗಳಲ್ಲಿ?

ಆದರೆ ಇದೆಲ್ಲವನ್ನೂ ಮರೆಯಿಸಿ ಇವನ ಕಾವ್ಯಗಳೆಂದರೆ 'ನಾನಂದ ಸುಂದರನ ಆನಂದಲಹರಿ'ಗಳೆಂಬ ಭಾವನೆಯನ್ನು ಹುಟ್ಟಿಸುವ ಪದರಚನೆ ಎಲ್ಲಕಡೆಗೆ ಇದೆ. ಇದು ಬರಿ ಕಿವಿಗಿಂಪಾಗಿ ತೋರುವ ಒಂದೇ ವಿಧವಾದ ಮಾಧುರ್ಯವಲ್ಲ; ಯಾವ ಸ್ವರವನ್ನಾದರೂ ತಾಳಲಯಬದ್ಧವಾಗಿ ಮಾಡಿ ಎಲ್ಲವನ್ನೂ ಮೇಳವಿಸಿ ಮೆರೆಯುವ ಗಂಭೀರಗಾನ. ಕೆಲವೆಡೆ

ನಿಟಿಲತಟಘಟಿತಕರಸಂ
ಪುಟಂ ಹಟನ್ಮಣಿಕಿರೀಟ ಮಂಜರಿಯಿಂದಂ ॥
ಜಟಿಲಿತಮೆನೆ ಪದಸೀಠೀ
ತಟಂ ನರೇಂದ್ರಂಗೆ ರತ್ನಜಟಿ ನತನಾದಂ ॥ ರಾ. ೧೧-೫೪

ಎಂಬ 'ಟಂಕಾರ'ಪ್ರಿಯತೆ ಕಂಡುಬಂದರೂ ಅದು ಒಡೆದುಕಾಣುವಷ್ಟಿಲ್ಲ. ಎಲ್ಲಿಯೋ ನುಸುಳಿಕೊಂಡುಹೋಗಿದೆ. ಈ ವಿಧವಾದ ನಾದಮಾಧುರ್ಯವು ಹುಟ್ಟುವುದಕ್ಕೆ ನಾಗಚಂದ್ರನ ಸಹಜರಸಿಕತೆಯೇ ಕಾರಣ. ಇದಕ್ಕೆ ಸಹಾಯವಾಗಿ ಅವನ ಪ್ರಚಂಡಪಾಂಡಿತ್ಯವಿದ್ದಿತು. ಅಂತೇ ಇವನಲ್ಲಿ ಅನುಪ್ರಾಸವು ಸಹಜವಾಗಿ ತೋರಿ ಕಾವ್ಯಸೌಂದರ್ಯವನ್ನು ಹೆಚ್ಚಿಸಿದೆ. ಈ ಅನುಪ್ರಾಸಕ್ಕೆ ಯಮಕವೂ ಒಂದು ವಿಧವಾದ ಬೆಡಗನ್ನುಂಟುಮಾಡಿರುವದರಿಂದ ಇವನ್ನು ನಾವು ಸ್ವಾಭಾವಿಕವಾಗಿಯೇ ಮೆಚ್ಚುವೆವು. ಅಭಿಪ್ರಾಯವು ಸ್ಪಷ್ಟವಾಗುವದಕ್ಕಾಗಿ ಮಾತ್ರ ಒಂದೆರಡು ಉದಾಹರಣೆಗಳನ್ನು ಕೊಡುವೆವು:

ಓಡಿಸಿದಾತನೀತನದಿರಾದ ವಿರೋಧಿಗಳಂ ವಿಲಾಸದಿಂ।
ಬಿಸೋಡಿಸಿದಾತನೀತನ ಸಮಾಯುಧನಂ ತನಗೊಲ್ದುಮಾಲೆಯಂ।

ಸೂಡಿಸಿದಾತನೀತನವನೀಶ್ವರಕನ್ನೆಯುಸೆಂದು ತೋಱಿ ವಾ।
ತಾಡಿದುದೊಲ್ದು ನೋಡಿಪುದು ಪೌರವಧೂಜನಮಾದಿರಾಜನಾ॥
ರಾ. ೩–೬೧

ಅಂಜದಿರಂಜದಿರೆನೆ ಪುಗಿ
ದಂಜಲಿಪುಟಮಂ ತರಂಗತಮನಿದಿರೊಳ್ಚಿಂ॥
ದಂಜನಗಿರಿಯುವೊಲಿರೆ ಕೊ
ಟ್ಟಂಜಯುಜಾಯಾಸಹಾಯನಭಯಮನಾಗಳ್ ॥ ೪–೭೩
ಬಳಸಿ ಸುೞಿದಾಡಿ ಕಾಲ್ವಿಡಿ
ದೆಳಸಿ ಕಲಾಲಾಪಮೊದವೆ ಜನನಿಯು ಪೊಲೆವಾ।
ಲ್ಗೞನುಂಬ ಶಿಶುಗಳಿಂತಿರೆ
ಕಳಮೆಯು ಪಾಲ್ಗೆನೆಯ ಪಾಲನುಂತನ್ರಗಿಳಿಗಳ್ ॥ ೮–೧೪೮

ಒಟ್ಟಿನಲ್ಲಿ ಅನುನಾಸಿಕ, ದಂತ್ಯ, ಅನುಸ್ವಾರಗಳ ಪ್ರಾಬಲ್ಯದಿಂದ ಹಲವೆಡೆ ಬಂದ ಸೊಗಸು ಸಹಜಮನೋಹರವಾಗಿದೆ. ಆದರೆ ಈ ಮನೋಹರತೆ ಅಷ್ಟು ಹೆಚ್ಚಿನದಲ್ಲ. ಇದು ಹೆಚ್ಚಿನ ಪದವಿಯನ್ನು ಪಡೆಯಬೇಕಾದರೆ ಭಾವದೊಡನೆ ಸಮರಸವಾಗಬೇಕಾಗುವದು. ಉದಾಹರಣೆಗಾಗಿ 'ಕಲಹಂಸಾಲಸಯಾನೆಯಂ' ಎಂಬ ಪದ್ಯವನ್ನು ತೆಗೆದುಕೊಂಡರೆ ಅಲ್ಲಿರುವ ದೀರ್ಘಾಕ್ಷರಗಳು ರಾಮನ ಚಿಂತಾಜಡತೆಯನ್ನು ಎಷ್ಟು ನಯವಾಗಿ ವ್ಯಕ್ತಮಾಡುತ್ತವೆಂಬುದು ತಿಳಿಯುವದು. ಅಥವಾ ಮಳೆಗಾಲವನ್ನು ವರ್ಣಿಸುವ 'ಘನಗರ್ಭಾಶಾವಧೂ—' ಎಂಬ ಪದ್ಯದ ಮಹಾಪ್ರಾಣಗಳಿಂದ ಆ ಕಾಲದ ಸಿಡಿಲಿನ ಆರ್ಭಟವನ್ನು ಕೇಳಬಹುದಾಗಿದೆ. ಇದು ಕಾವ್ಯಸಮಾಧಿಯನ್ನು ಸಾಧಿಸಿದವರಿಗೆ ಮಾತ್ರ ಬರಬಲ್ಲುದು.

ಆದರೆ ಈ ಶೈಲಿಯಲ್ಲಿ ದೋಷಗಳಿಲ್ಲದೆ ಇಲ್ಲ. ಆದಿಪಂಪನಲ್ಲಿ ಹುಡುಕಿತೆಗೆಯಬೇಕಾದ ಶ್ಲೇಷವು ಇಲ್ಲಿ ಧೈರ್ಯವಾಗಿ ಮುಂದೆ

ಬಂದಿದೆ. ವಿರೋಧಾಭಾಸವೂ ತಲೆಯೆತ್ತಿ ಕಾವ್ಯಾಭಾಸವನ್ನುಂಟು ಮಾಡಿದೆ. [ಉಪಮೆಗಳು ಹೆಚ್ಚಾಗಿ ಕವಿಸಮಯದ ಭಾರದಿಂದ ಬಗ್ಗಿವೆಯೆಂಬುದು ನಿಜವಾದರೂ ಆದಿಪಂಪನಂತೆ ನಾಗಚಂದ್ರನಾದರೂ 'ಬೆಳ್ಳಿರಲೆಗೆ ಗಱೆಮೂಡಿದ ತೆಱದಿಂ' 'ಗಾಳಿಗೆಱಂಕೆಮೂಡಿದ ವೊಲ್' 'ತುಂಬುರಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದು' 'ಗಾಳಿ ಗೊಡ್ಡಿದ ಸೊಡರಂತೆ' 'ಬಱಸಿಡಿಲಂ ಬಱೆಯಟ್ಟಿ ಬರಿಸುವಂತೆ' 'ಎಱಕೆ ಮುಱಿದ ಪಕ್ಕಿವೊಲಿರ್ದಂ' 'ಸುೞಿಗಳ್ ನೀರ್ದಿಗುರಿಯವೊಲ್ ಸುೞಿದುವು' 'ನಂದುವ ಸೊಡರಂತೆ ಉದ್ದವುರಿದು' 'ಪಲವಂ ನೀಂ ಗಿಳಿಯಂದದಿಂ ಗಳಪದಿರ್' ಮೊದಲಾದ ಸಹಜೋಪಮೆಗಳನ್ನೂ ಉಪಯೋಗಿಸಿದ್ದಾನೆಂಬುದನ್ನು ನಾವು ಮರೆಯಲಾಗದು. ಇದಲ್ಲದೆ ಕವಿಸಮಯವನ್ನನುಸರಿಸಿದರೂ ಅದನ್ನು ವಿಪರೀತ ರೀತಿಗೆ ಒಯ್ಯಿಲ್ಲವೆಂಬುದೂ ನೆನಪಿಡತಕ್ಕ ಮಾತಾಗಿದೆ]. ಎಲ್ಲಕ್ಕೂ ಹೆಚ್ಚಾಗಿ ಇವನ ಅತಿರೇಕವಾದ ಅರ್ಥಾಂತರನ್ಯಾಸಪ್ರೀತಿ. ಎಲ್ಲೆಲ್ಲಿಯೂ ನೀತಿಪಾಠವನ್ನು ಕಲಿಸುವ ಹವ್ಯಾಸವುಳ್ಳ ಶಿಕ್ಷಕನಂತೆ ನಡುನಡುವೆ ಕವಿ ತನ್ನ ಅರ್ಥಾಂತರನ್ಯಾಸವನ್ನು ಸೇರಿಸುವುದು ಹಲವೆಡೆ ರಸಾನುಭವಕ್ಕೆ ಆತಂಕವನ್ನುಂಟುಮಾಡಿದೆ. ನಾಗಚಂದ್ರನ ಕಾವ್ಯಗಳಲ್ಲಿ ಕೆಲವೆಡೆ ವಿಶೇಷವಾಗಿರುವ ಸಂಸ್ಕೃತಮಿಶ್ರಣವೂ ದೋಷವೆಂದು ಕೆಲವರು ಹೇಳಬಹುದು. ಆದರೆ ಅದು ಇವನಲ್ಲಿ ಅಕ್ಷಮ್ಯವಾಗಿದೆಯೆಂದು ನಾವು ಎಣಿಸಲಾರೆವು. ಮೊದಲು ಕಾವ್ಯರಚನೆ ಮಾಡಿದ ಮಹಾಕವಿಗಳಿಗಿಂತ ಹೆಚ್ಚಾಗಿ ಈತನು ಕನ್ನಡಪದಗಳನ್ನು ಮೆಚ್ಚುವಂತಿದೆ. ಇದಕ್ಕೆ ಆ ಕಾಲದ ಕನ್ನಡಸಾಹಿತ್ಯದ ಪರಿಸ್ಥಿತಿ ಕಾರಣವಾಗಿದ್ದರೂ ಇರಬಹುದು. ಏಕೆಂದರೆ ಇವನ ಸಮಕಾಲೀನನಾದ ನಯಸೇನನು (೧೧೧೨ ಕ್ರಿ. ಶ.) 'ಮಸುಕದ ಸಕ್ಕದಮನಿಕ್ಕುವವ'ರನ್ನು ಜರಿಯುವ ರೀತಿಯಿಂದ ಅತಿಯಾದ ಸಂಸ್ಕೃತಪದ

ಪ್ರಯೋಗಗಳನ್ನು ಪ್ರತಿಭಟಿಸುವ ಪಕ್ಷವೊಂದು ಆಗ ಇತ್ತೆಂದು ತೋರುತ್ತದೆ. ಆ ಪಂಗಡಕ್ಕೆ ನಾಗಚಂದ್ರನೂ ಸೇರಿರಬೇಕು. ಅಂತೆ ಇವನ ಶೈಲಿ ಸುಗಮವಾಗಿದೆ. 'ಮುನ್ನೀರ್ ಬೆನ್ನೀರೆನೆ ಬೆರಸಲಣ್ಣೊ ತಣ್ಣೀರೊಳವೆ' ಎಂಬ ಅಂದವಾದ ಕನ್ನಡನುಡಿಗಳು ಅಲ್ಲಲ್ಲಿ ಬಂದಿವೆ. ಗದ್ಯರೂಪದಲ್ಲಿ ಬರುವ ಸಂಭಾಷಣಗಳಂತೂ ಇಂದಿನ ಕನ್ನಡಶೈಲಿಯಲ್ಲಿಯೇ ಇದ್ದಹಾಗಿವೆ. ಆದರೆ ಬಾಣಭಟ್ಟನೇ ಗದ್ಯಶೈಲಿಯ ಸೀಮಾಪುರುಷನೆಂದು ತಿಳಿದಿರುವಾಗ ಕನ್ನಡದ ಸಹಜಶೈಲಿ ಅಪರಾಧಿಯಂತೆ ಅಂಜುತ್ತ ಅಲ್ಲಲ್ಲಿ ಸುಳಿದರೆ ಆಶ್ಚರ್ಯವಲ್ಲ. ಒಟ್ಟಿನಲ್ಲಿ, ಕೆಲಗದ್ಯಭಾಗವನ್ನು ಳಿಯುವುದಾದರೆ ಇವನ ಶೈಲಿ ಸುಂದರವಾಗಿದೆ' ಸುಲಭವಾಗಿದೆ, ಸತ್ತ್ವಯುತವಾಗಿದೆಯೆಂದು' ಧೈರ್ಯವಾಗಿ ಹೇಳಬಹುದು. ನಾಗಚಂದ್ರನೇ ಹೇಳುವಂತೆ ಇವನ ಕಾವ್ಯಗಳು 'ವಚಶ್ರೀನರ್ತಕೀವೇದಿಕೆ'ಗಳಾಗಿವೆ. ಕಿವಿಗೊಟ್ಟು ಕೇಳುವುದಾದರೆ ಆ ವೇದಿಕೆಯಿಂದ ವಾಗ್ದೇವಿಯ ವಿವಿಧವಾದ ಕಿಂಕಿಣೀಝಣರವವು ಈಗಲೂ ಕೇಳಬಹುದಾಗಿದೆ. ಇಂತಹ ಪುಣ್ಯಶಾಲಿಯಲ್ಲಿ ಪಡೆದ ನಾವು

ಮೃದುಪದಬಂಧಮುಂ ಬಗೆಯುಭಾವದ ಮೆಯ್ಸಿರಿಯುಂ ರಸಪ್ರವಾ।
ಹದ ನೆಲೆವೆರ್ಚಸಿರಿಬಿಪ್ಪುದು ಭಾವಿಸಿ ಭಾವಿಸಿ ಮೆಚ್ಚಿಮೆಚ್ಚಿ ಪೊ॥
ಣ್ಮಿದ ಪುಲಕಂಗಳಿಂ ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವ।
ರ್ಷದಿನನುರಾಗಮುಂ ಪಡೆದ ಸಜ್ಜನಸಂಸ್ತವಮೊಂದೆ ಸಾಲದೆ॥

ಎಂದವನ ಬಯಕೆಯನ್ನು ತೀರಿಸಬೇಡವೆ?

---